# ಶ್ರೀ ಬಾಳೇಶ ಲಕ್ಷೆಟ್ಟಿ ಅವರ ಕಾವ್ಯ ವಿವೇಚನೆ

ಕನ್ನಡ ವಿಷಯದಲ್ಲಿ ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ.


ಸಂಶೋಧಕರು

**ಶ್ರೀ ಸದಾಶಿವ ವಿಠ್ಠಲ ಭಜಂತ್ರಿ**

ನೋಂದಣಿ ಸಂಖ್ಯೆ : BRDSH/00707

ಮಾರ್ಗದರ್ಶಕರು

**ಡಾ.ವ್ಹಿ.ಎಸ್.ಮಾಳಿ**

ನಿರ್ದೇಶಕರು, ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ





**ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ.**
**ಹಾರೂಗೇರಿ. ಜಿ.ಬೆಳಗಾವಿ**
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

**೨೦೧೪-೧೫**

# ಶ್ರೀ ಬಾಳೇಶ ಲಕ್ಷೆಟ್ಟಿ ಅವರ ಕಾವ್ಯ ವಿವೇಚನೆ

ಕನ್ನಡ ವಿಷಯದಲ್ಲಿ ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನ ನಿಬಂಧ.


ಸಂಶೋಧಕರು

**ಶ್ರೀ ಸದಾಶಿವ ವಿಠ್ಠಲ ಭಜಂತ್ರಿ**

**ನೋಂದಣಿ ಸಂಖ್ಯೆ : BRDSH/00707**

ಮಾರ್ಗದರ್ಶಕರು

**ಡಾ.ವ್ಹಿ.ಎಸ್.ಮಾಳಿ**

ನಿರ್ದೇಶಕರು, ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ






**ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ.**

**ಹಾರೂಗೇರಿ, ಜಿ.ಬೆಳಗಾವಿ**

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

**೨೦೧೪-೧೫**

## **ದೃಢೀಕರಣ ಪತ್ರ**

**ಶ್ರೀ ಸದಾಶಿವ ವಿಠ್ಠಲ ಭಜಂತ್ರಿ** ಇವರು **'ಶ್ರೀ ಬಾಲೇಶ ಲಕ್ಷೆಟ್ಟಿ ಅವರ ಕಾವ್ಯ ವಿವೇಚನೆ'** ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೧೫-೬-೨೦೧೪

**ಡಾ.ವ್ಹಿ.ಎಸ್.ಮಾಳಿ**
**ಮಾರ್ಗದರ್ಶಕರು**
**ನಿರ್ದೇಶಕರು,**
**ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ,**
**ಹಾರೂಗೇರಿ, ತಾ. ರಾಯಬಾಗ ಜಿಲ್ಲೆ : ಬೆಳಗಾವಿ**

# ಪ್ರಮಾಣ ಪತ್ರ

**'ಶ್ರೀ ಬಾಳೇಶ ಲಕ್ಷೆಟ್ಟಿ ಅವರ ಕಾವ್ಯ ವಿವೇಚನೆ'** ಅಧ್ಯಯನ ಎಂಬ ಶೀರ್ಷಿಕೆಯ ನಿಬಂಧವನ್ನು **ಡಾ.ವ್ಹಿ.ಎಸ್.ಮಾಳಿ** ಅವರ ಮಾರ್ಗದರ್ಶನದಲ್ಲಿ ನಾನು ಈ ನಿಬಂಧವನ್ನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ **ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೧೫-೬-೨೦೧೪

**ಶ್ರೀ ಸದಾಶಿವ ವಿಠ್ಠಲ ಘಟಾಂಬ್ರಿ**
**ಸಂಶೋಧನ ವಿದ್ಯಾರ್ಥಿ**
**ಶ್ರೀ ಬಿ.ಆರ್.ದರೂರ ಸಂಶೋಧನಾ ಕೇಂದ್ರ,**
**ಹಾರೂಗೇರಿ, ತಾ. ರಾಯಬಾಗ ಜಿಲ್ಲೆ : ಬೆಳಗಾವಿ**

# ● ಪರಿವಿಡಿ ●

## ಅಧ್ಯಾಯ-ಒಂದು

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಒಂದು ಭಾಷೆಗೆ ಜೀವಕಳೆಯನ್ನು ತುಂಬುವುದೇ ಸಾಹಿತ್ಯ. ಸಾಹಿತ್ಯವು ಭಾಷೆಯ ಹೃದಯ. ಭಾಷೆಯಿಂದ ಸಾಹಿತ್ಯ ಜನ್ಮ ತಾಳಿದರೂ ಭಾಷೆಯ ಬೆಳವಣಿಗೆಯಲ್ಲಿ ಸಾಹಿತ್ಯ ರೈತನಂತೆ ಶ್ರಮಿಸುತ್ತಿದೆ. ಕನ್ನಡ ಸಾಹಿತ್ಯ ಲೋಕ ಸಾಹಿತ್ಯ ಪ್ರಪಂಚದಲ್ಲೇ ಮಹತ್ವದ್ದು. ಇಂತಹ ಕನ್ನಡ ಸಾಹಿತ್ಯವನ್ನು ಮೂರು ಕಾಲಘಟ್ಟಗಳಲ್ಲಿ ವಿಂಗಡಿಸುತ್ತೇವೆ. ೧. ಹಳಗನ್ನಡ ೨. ನಡುಗನ್ನಡ ೩. ಹೊಸಗನ್ನಡ ಈ ಮೂರು ಕಾಲಘಟ್ಟಗಳಲ್ಲಿ ಕಾವ್ಯರೂಪ ಬೆಳೆಯುತ್ತಲೇ ಹರಿದು ಬಂದಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾವ್ಯ ರೂಪದ ಸಾಹಿತ್ಯ ಸ್ವಾದ ಮಹತ್ವದ ಘಟ್ಟ. ಕಾವ್ಯವಿಲ್ಲದೆ ಸಾಹಿತ್ಯವಿಲ್ಲ; ಸಾಹಿತ್ಯವಿಲ್ಲದೆ ಕಾವ್ಯವಿಲ್ಲ. ಕಾವ್ಯವಿಲ್ಲದ ಸಾಹಿತ್ಯ ಮರಭೂಮಿಯೊಳಗಿನ ಬೀಜ. ಸಾಹಿತ್ಯ ಪಸಲೊಡೆಯಬಾಕಾದರೆ ಕಾವ್ಯರೂಪದ ರೆಂಬೆ–ಕೊಂಬೆಗಳು ಬೇಕೆಬೇಕು.

ಕನ್ನಡ ಕಾವ್ಯಪರಂಪರೆ ಹೊಸಹೊಸ ಪ್ರೇರಣೆ–ಪರಿಕರಗಳನ್ನು ಸ್ವೀಕರಿಸಿಕೊಂಡು ಭಿನ್ನವಾಗಿ ನಿಂತು, ನಿರಂತರವಾದ ಪರಂಪರೆಯ ಪ್ರಜ್ಞೆಯಲ್ಲಿ ನವನವಿತ ತಿರುವುಗಳನ್ನು ಪಡೆದು ಸ್ವತಂತ್ರ, ಶ್ರೀಮಂತವಾಗಿ ಬೆಳೆದು ಬಂದಿದೆ; ಬರುತ್ತಲಿದೆ.

ಸುಮಾರು ಆರೇಳು ದಶಕಗಳ ಅವಧಿಯಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ, ಬಂಡಾಯೇತರ ಕಾಲಘಟ್ಟಗಳ ಸನ್ನಿವೇಶಗಳನ್ನು ನಿರ್ಮಾಣ ಮಾಡಿಕೊಳ್ಳುತ್ತ ಸುದೀರ್ಘವಾಗಿ ಹರಿದು ಬಂದಿರುವ, ಈ ಕಾವ್ಯ ಸಾಹಿತ್ಯದ ರೂಪಗಳು ಹಲವಾರು ಪ್ರತಿಭಾವಂತ ಸಾಹಿತಿಗಳನ್ನು, ಕವಿಗಳನ್ನು ಕನ್ನಡಕ್ಕೆ ಕಾಣಿಕೆಯಾಗಿ ನೀಡಿರುವುದು ಅವಿಸ್ಮರಣೀಯ. ಇಂತವರ ಸಾಲಿನಲ್ಲಿ ಶ್ರೀ ಬಾಳೇಶ ಲಕ್ಷೆಟ್ಟಿಯವರೊಬ್ಬರು. ನವೋದಯ ಸಾಹಿತ್ಯ ಕಾಲಘಟ್ಟದಲ್ಲಿ ಸಾಹಿತ್ಯ ಕೃಷಿಯನ್ನು ಆರಂಭಿಸಿದ ಲಕ್ಷೆಟ್ಟಿಯವರು ಕಾವ್ಯ, ನಾಟಕ, ಕಥೆ, ಕಾದಂಬರಿ, ಪ್ರವಾಸ, ಪ್ರಹಸನ, ಪ್ರಬಂಧ, ಅಂಕಣ ಸಾಹಿತ್ಯ, ಜೀವನ ಚರಿತ್ರೆ ಇತ್ಯಾದಿ ಸಾಹಿತ್ಯ ಪ್ರಕಾರಗಳನ್ನು ಕನ್ನಡಿಗರಿಗೆ ಉಣಬಡಿಸಿದ್ದಾರೆ. ಲಕ್ಷೆಟ್ಟಿಯವರ ಕಾವ್ಯರೂಪ ಸಹೃದಯರಿಗೆ ಅಹ್ಲಾದ ಉಂಟು ಮಾಡುವಂತದ್ದು. ಲಕ್ಷೆಟ್ಟಿಯವರ ಕಾವ್ಯ ಜನಪದ, ಹನಿಗವನ, ಚುಟುಕು ಸಾಹಿತ್ಯ ರೂಪಗಳಿಂದ ರಚನೆಗೊಂಡಿದೆ. ಇವರು ಹದಿನಾಲ್ಕು ಕವನ ಸಂಕಲನಗಳನ್ನು ಹೊರತಂದಿದ್ದಾರೆ.

ಲಕ್ಷೆಟ್ಟಿಯವರ ಕಾವ್ಯ ಕೃಷಿ ಕನ್ನಡ ಸಾಹಿತ್ಯ ಲೋಕಕ್ಕೆ ಮತ್ತಷ್ಟು ನವಚೇತನ ತಂದಿದೆ. ಇವರ ಕಾವ್ಯ ಕೃಷಿ ಕನ್ನಡಿಗರ ಜನಮಾನಸದಲ್ಲಿ ಭದ್ರಗೊಂಡಿದೆ. ವರಕವಿ ಬೇಂದ್ರೆ, ಕೃಷ್ಣಮೂರ್ತಿ ಪುರಾಣಿಕ, ಇಂಚಲ, ಬೆಟಗೇರಿ ಕೃಷ್ಣಶರ್ಮ ಮುಂತಾದ ಪ್ರತಿಭಾವಂತ ಕವಿಗಳಿಂದ ಸ್ಫೂರ್ತಿ ಪಡೆದ ಲಕ್ಷೆಟ್ಟಿಯವರ ಕಾವ್ಯವು ಅವರಷ್ಟೆ ಸಮೃದ್ಧಿ ಪಡೆದಿದೆ. "ಹಳೆ ಬೇರು ಹೊಸ ಚಿಗುರು" (ಡಿ.ವಿ.ಜಿ.) ಎನ್ನುವಂತೆ ಹಿರಿಯ ಸಾಹಿತಿಗಳು ಇಟ್ಟ ಹೆಜ್ಜೆಯನ್ನೇ ಕಿರಿಯ ಸಾಹಿತಿ ಲಕ್ಷೆಟ್ಟಿ ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತಾ ಎಳುತ್ತಾ ಬೀಳುತ್ತಾ ಕಾವ್ಯ ರಚಿಸಿದ ಕವಿ ಬಾಳೇಶ.

ನವೋದಯ ಸಾಹಿತ್ಯದ ಏಳಿಗೆಗೆ ಲಕ್ಷೆಟ್ಟಿಯವರ ಕಾವ್ಯ ಸಂಕಲನಗಳಲ್ಲಿ ಮತ್ತಷ್ಟು ಸಮೃದ್ಧಿಯನ್ನು ಪಡೆಯಿತು. ಕವನ, ಹನಿಗವನ, ಚುಟುಕು ಇತ್ಯಾದಿ ಕಾವ್ಯರೂಪಗಳು ಲಕ್ಷೆಟ್ಟಿಯವರ ಕೈಯಲ್ಲಿ ಬೆಳೆದು ಬಂದಿದೆ. ಇವರ ನಂತರ ಕವಿಗಳು ಕಾವ್ಯ ರಚನೆ ಮಾಡಿದರೂ ಇವರಷ್ಟು ಸಮಂಜಸ ಕವನ ಸಂಕಲನಗಳು ಹೊರಬರಲಿಲ್ಲ; ಬಂದರೂ ಆ ಪರಂಪರೆಯನ್ನು ಮುಂದುವರೆಸಿ ಕೊಂಡು ಬರಲಿಲ್ಲ.

ಹತ್ತು-ಹಲವಾರು ಕಾವ್ಯಕೃಷಿ ಮಾಡಿ ಇಂದು ಸಾಹಿತ್ಯ ಲೋಕದಲ್ಲಿ ಘಟಾನುಘಟಿ ಕವಿಗಳಲ್ಲಿ ಇವರೊಬ್ಬರಾಗಿ ಗುರ್ತಿಸಿಕೊಂಡಿದ್ದಾರೆ. ಇವರು ವೃತ್ತಿಯಲ್ಲಿ ಅಧ್ಯಾಪಕರು; ಪ್ರವೃತ್ತಿಯಲ್ಲಿ ಕವಿ. ಇಂಥ ಬಿಡುವಿಲ್ಲದ ವೃತ್ತಿಯಲ್ಲಿದ್ದುಕೊಂಡು ಸಾಹಿತ್ಯ ಕೃಷಿಗೈದು ಇಂದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ತಮ್ಮ ಹೆಸರನ್ನು ಚಿರಸ್ಥಾಯಿಗೊಳಿಸಿದ್ದಾರೆ. ಶ್ರೇಷ್ಠ ಕವಿಗಳ ಸಾಲಿನಲ್ಲಿ ನಿಲ್ಲತಕ್ಕಂತ ವ್ಯಕ್ತಿ ಶ್ರೀ ಬಾಳೇಶ ಲಕ್ಷೆಟ್ಟಿಯವರು.

ಭಾಗ್ಯೋದಯ, ಪುಣ್ಯಸ್ಮೃತಿ, ಧ್ಯೇಯವಾದಿ, ಎಸಳು, ಸೇವೆಸ್ಮರಣೆ, ಯಕ್ಷ ಪ್ರಶ್ನೆ, ಗಾಳಿಪಟ, ತೋಳ ಬಂದಾವೋ ತೋಳ, ಭಾವಸರಭಿ, ಅಟಲಜಿ ಮತ್ತು ಇತರ ಕವಿತೆಗಳು, ಜಗಕೆಲ್ಲ ಮತ್ತು ಇತರ ಕವಿತೆಗಳು, ಏನು ಮಾತನಾಡಲಿ ಗೆಳೆಯ, ನಿರಂತರ (ಸಮಗ್ರ ಕಾವ್ಯ), 'ನಾ' ಇಲ್ಲದಿದ್ದಾಗ ಹೀಗೆ ಹದಿನಾಲ್ಕು ಕವನ ಸಂಕಲನಗಳನ್ನು ಹಾಗೂ ಹಲವಾರು ಹನಿಗವನ, ಚುಟುಕುಗಳನ್ನು ಪ್ರಕಟಿಸಿ ಸಾಹಿತ್ಯ ಲೋಕವನ್ನು ಅಚ್ಚರಿ ಪಡಿಸಿದರು. ಆದರೆ ಯಾರೂ ಇವರನ್ನು ಗುರುತಿಸುವ ಪ್ರಯತ್ನ ಮಾಡಲಿಲ್ಲ. ಲಕ್ಷೆಟ್ಟಿಯವರ ಬರವಣಿಗೆಯ 'ಷಷ್ಠಿ-ಪೂರ್ತಿ' ಕಳೆದರೂ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ "ಎಲೆಯ ಮರೆಯ ಕಾಯಿಯಂತೆ" ಮರೆಯಾಗಿದ್ದಾರೆ. ತಮ್ಮೊಳಗಿನ ಕವಿತಾ ಸಾಮರ್ಥ್ಯವನ್ನು ಕನ್ನಡಿಗರಿಗೆ ತೋರ್ಪಡಿಸಿದ್ದರೂ ಶ್ರೀ ಬಾಳೇಶ ಲಕ್ಷೆಟ್ಟಿಯವರು ಕನ್ನಡ ಸಾಹಿತ್ಯದಲ್ಲಿ ಅಲಕ್ಷಕ್ಕೊಳಗಾಗಿರುವುದು ಖೇದಕರ ಸಂಗತಿ. ಆದ್ದರಿಂದ ನಿದ್ದೆಯ ಜೋಲಿ

ಹೋದಂತಿರುವ ಸಾಹಿತ್ಯ ಓದುಗರಿಗೆ, ಸಹೃದಯರಿಗೆ ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯ ಕೃಷಿಯನ್ನು ತಿಳಿಸಿಕೊಡುವ ಉದ್ದೇಶ ಹೊಂದಿ "ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯ" ಎಂಬ ಸಂಪ್ರಬಂಧ ರಚಿಸಲು ಇಚ್ಛಿಸಿದ್ದೇನೆ. ಒಬ್ಬ ಶ್ರೇಷ್ಠ ಕವಿಗೆ ದಕ್ಕಬೇಕಾದ ನೆಲೆ-ಬೆಲೆಗಳನ್ನು ನೀಡುವ ಪ್ರಯತ್ನ ಮಾಡಿ, ಕನ್ನಡಿಗರಿಗೆ ಲಕ್ಷೆಟ್ಟಿಯವರ ಕಾವ್ಯ ಶ್ರಮ ತೋರ್ಪಡಿಸುವ ಯತ್ನ ಮಾಡಿದ್ದೇನೆ.

ನಮ್ಮಲ್ಲಿ ಹೆಸರಾದ ಸಾಹಿತಿಗಳಿದ್ದಾರೆ, ನುರಿತ ಸಮಾಜ ಸೇವಾ ಕಾರ್ಯಕರ್ತರಿದ್ದಾರೆ. ಅನುಭವಿ ಶಿಕ್ಷಣ ಸಂಸ್ಥೆಗಳ ಸಂಘಟಕರಿದ್ದಾರೆ. ಆದರೆ ಕೈಗೆತ್ತಿಕೊಂಡ ಎಲ್ಲಾ ಕ್ಷೇತ್ರಗಳಲ್ಲೂ ಏಕಕಾಲಕ್ಕೆ ಹೆಸರು ಗಳಿಸುವಂತೆ ಕೆಲಸ ಮಾಡುವುದು ಸುಲಭದ ಸಂಗತಿಯಲ್ಲ. ಶ್ರೀ ಲಕ್ಷೆಟ್ಟಿಯವರು ಅಧ್ಯಾಪಕರಾಗಿದ್ದರೂ ಸಾಹಿತ್ಯ ಮತ್ತು ಸಮಾಜ ಸೇವೆಯಲ್ಲಿ ವಿಶೇಷ ಹೆಸರು ಗಳಿಸಿದ್ದಾರೆ. ಇವರ ಈ ಕಾರ್ಯ ಆದರ್ಶವೂ ಹೌದು, ಅನುಕರಣೀಯವೂ ಹೌದು.

ಶ್ರೀ ಬಾಳೇಶ ಲಕ್ಷೆಟ್ಟಿಯವರು ಸಾಮಾಜಿಕ ಕಳಕಳಿ, ಪ್ರಚಲಿತ ಸಮಸ್ಯೆಗಳ ಚಿಂತನೆ, ಯುವಕರಲ್ಲಿರುವ ಅಶಿಸ್ತನು ಕುರಿತು ಧಾರವಾಡ ಆಕಾಶವಾಣಿ ಹಾಗೂ ಚಂದನ ಟಿ.ವ್ಹಿ. ಸಂದರ್ಶನದಲ್ಲಿ ನೀಡಿದ ಚಿಂತನೆಗಳು ಹಾಗೂ ಚಿಂತನ ಬರಹಗಳೇ ಸಾಕ್ಷಿ.

ಶ್ರೀ ಲಕ್ಷೆಟ್ಟಿಯವರ ಕಾವ್ಯಗಳಲ್ಲಿ ನಿಸರ್ಗ, ಪ್ರೀತಿ-ಪ್ರೇಮ, ದಾಂಪತ್ಯ ಜೀವನದಲ್ಲಿ ಪ್ರೀತಿ ಬೆಸುಗೆ, ಸಾಮಾಜಿಕ ಚಿಂತನೆ, ಜನನಿ ಜನ್ಮ ಭೂಮಿ, ದಲಿತ ಹಾಗೂ ಬಂಡಾಯ ಧೋರಣೆಗಳು, ಭ್ರಷ್ಟಾಚಾರದ ಪರಮಾವಧಿ, ಶೋಷಣೆಯ ವಿಚಾರಧಾರೆ, ವ್ಯಕ್ತಿ ಚಿತ್ರಣ, ಸ್ತ್ರೀ ಮಹತ್ವ ಇತ್ಯಾದಿ ವಿಷಯಗಳನ್ನು ಒಳಗೊಂಡಿರುವುದನ್ನು ಕಾಣಲಾಗುತ್ತದೆ. ಇವುಗಳಲ್ಲಿ ಅಡಗಿರುವ ರಹಸ್ಯ ಮತ್ತು ಅರ್ಥವನ್ನು ಸಮಾಜ, ಸಾಹಿತ್ಯ ಕ್ಷೇತ್ರಕ್ಕೆ ತಿಳಿಸುವ ಮೂಲಕ ಲಕ್ಷೆಟ್ಟಿಯವರ ಬರಹದ ವೈವಿಧ್ಯ, ವೈಶಿಷ್ಟ್ಯ, ವಸ್ತುಗಳನ್ನು ಗುರುತಿಸುವುದು ಅಧ್ಯಯನದ ಉದ್ದೇಶಗಳಲ್ಲೊಂದು.

ಕಾವ್ಯ ಬಿಂದುವಿನಲ್ಲಿ ಸಿಂಧುವನ್ನು ಹೇಳುವ ಗುಣವನ್ನು ಹೊಂದಿವೆ ಎಂಬುದನ್ನು ತಿಳಿಯಬೇಕಾದರೆ, ಲಕ್ಷೆಟ್ಟಿಯವರ ಕಾವ್ಯಗಳನ್ನು ನೋಡಬೇಕು. ಅಂತಹ ಶಕ್ತಿಯನ್ನು ಹೊಂದಿರುವ ಕಾವ್ಯ ಪರಂಪರೆಯ ಕೊಂಡಿಯಾಗಿರುವ ಅವರು ಸಾಹಿತ್ಯ ವಲಯದ ಹಲವಾರು ವ್ಯಕ್ತಿಗಳಿಗೆ ಇಂದಿಗೂ ಅಪರಿಚಿತರು. ಆದ್ದರಿಂದ ಸಾಹಿತ್ಯ ಕ್ಷೇತ್ರ ಮತ್ತು ಸಾಹಿತ್ಯಾಸಕ್ತರಿಗೆ ಶ್ರೀ ಲಕ್ಷೆಟ್ಟಿಯವರನ್ನು ಪರಿಚಯಿಸುವುದು ಕೂಡ ಅಧ್ಯಯನದ ಉದ್ದೇಶವಾಗಿದೆ.

ಶ್ರೀ ಬಾಳೇಶ ಲಕ್ಷೆಟ್ಟಿಯವರು ಅಧ್ಯಾಪಕರಾಗಿದ್ದುಕೊಂಡು ಹೇರಳವಾದ ಕಾವ್ಯ ರೂಪಗಳನ್ನು ರಚಿಸಿದರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಆ ಕಾರಣದಿಂದ ಲಕ್ಷೆಟ್ಟಿಯವರು ವಿಶೇಷ ವ್ಯಕ್ತಿಯಾಗಿ ಕಾಣುವುದನ್ನು ನೋಡಿ, ಅವರ ಕಾವ್ಯ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಕಾವ್ಯ ಸಂಕಲನ, ಕಥಾ ಸಂಕಲನ, ಕಾದಂಬರಿ, ಜೀವನ ಚರಿತ್ರೆಗಳು, ವ್ಯಕ್ತಿ ಚಿತ್ರಗಳು, ಪತ್ರ ಸಾಹಿತ್ಯ, ಸಮಾಜ ಚಿತ್ರಣ, ಶಿಶು ಸಾಹಿತ್ಯ, ಅಂಕಣ, ಸಂಕೀರ್ಣ ಹಾಗೂ ಸಂಪಾದನೆ ಕ್ಷೇತ್ರಗಳಲ್ಲಿ ಶ್ರಮಿಸಿದ ಇವರ ಬಹುಮುಖ ಪ್ರತಿಭೆಯನ್ನು ಸಾರಸ್ವತ ಲೋಕಕ್ಕೆ ತಿಳಿಸುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ.

ಶ್ರೀ ಬಾಳೇಶ ಲಕ್ಷೆಟ್ಟಿಯವರ ಬಹುಮುಖ ಪ್ರತಿಭೆಯನ್ನು ಮೆಚ್ಚಿ ಹಲವಾರು ಸಂಘಸಂಸ್ಥೆಗಳು, ಸರಕಾರ, ಶಿಕ್ಷಣ ಕೇಂದ್ರಗಳು ಪ್ರಶಸ್ತಿಯನ್ನು ನೀಡಿ ಗೌರವಿಸಿವೆ. ಅಲ್ಲದೆ ೨೦೧೧(೦೩-೧೨) 'ವಿಶ್ವ ಕನ್ನಡ ಸಮ್ಮೇಳನ' ಬೆಳಗಾವಿಯಲ್ಲಿ 'ದೇಸಿ ಚಿಂತನ'ಗೋಷ್ಠಿಯಲ್ಲಿ ವಿಶೇಷ ಆಹ್ವಾನಿತರಾಗಿ ಭಾಗವಹಿಸಿದ್ದು ಅವರು ಗೌರವಕ್ಕೆ ಪಾತ್ರರಾಗಿದ್ದಾರೆ. ಇಂಥ ಹಲವಾರು ವೈಶಿಷ್ಟ್ಯಗಳನ್ನು ನಾಡಿನ ಉದ್ದಗಲಕ್ಕೂ ತಿಳಿಸುವ ಉದ್ದೇಶ ಹೊಂದಿ ಸಂಪ್ರಬಂಧ ರಚಿಸಲಾಗಿದೆ.

**ವ್ಯಾಪ್ತಿ**

ಅಧ್ಯಯನದ ವ್ಯಾಪ್ತಿಯು ಐದು ಆಧ್ಯಾಯಗಳನ್ನು ಒಳಗೊಂಡಿದೆ. ಶ್ರೀ ಬಾಳೇಶ ಲಕ್ಷೆಟ್ಟಿಯವರ 'ಕಾವ್ಯ ಸಂಕಲನ' ಕುರಿತ ಅಧಯ್ಯನ ಮಾಡುವುದು ಇಲ್ಲಿ ಮುಖ್ಯವಾಗಿದೆ. ಈ ಐದು ಅಧ್ಯಾಯಗಳು ಒಳಗೊಂಡಿರುವ ವಿಷಯವನ್ನು ಈ ಕಳಗಿನಂತೆ ನೋಡಬಹುದು.

**ಅಧ್ಯಾಯ- ಒಂದು** : ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಹೇಳಲಾಗಿದೆ.

**ಅಧ್ಯಾಯ- ಎರಡು** : "ಶ್ರೀ ಬಾಳೇಶ ಲಕ್ಷೆಟ್ಟಿಯವರ ಬದುಕು-ಬರಹವನ್ನು ಕುರಿತು ಹೇಳಲಾಗಿದೆ. ಈ ಭಾಗದಲ್ಲಿ ಲಕ್ಷೆಟ್ಟಿಯವರ ಬದುಕಿಗೆ ಸಂಬಂಧಿಸಿದಂತೆ ಅವರ ಮನೆತನ ಹಿನ್ನೆಲೆ, ಜನನ ಮತ್ತು ಬಾಲ್ಯ, ಶಿಕ್ಷಣ, ವಿವಾಹ ಮತ್ತು ವೃತಿ ಜೀವನ, ಆಸಕ್ತಿ, ಅಭಿರುಚಿ, ಕಾವ್ಯ ಶೈಲಿ. ಅವರ ಬದುಕಿನ ಮಹತ್ವದ ಘಟನೆಗಳು ಹಲವಾರು ವಿಷಯಗಳನ್ನು ವಿವರವಾಗಿ ತಿಳಿಸಲಾಗಿದೆ.

**ಅಧ್ಯಾಯ- ಮೂರು** : 'ಲಕ್ಷೆಟ್ಟಿಯವರ ಕಾವ್ಯ'- ಈ ಭಾಗದಲ್ಲಿ ಲಕ್ಷೆಟ್ಟಿಯವರ ಕಾವ್ಯ ಪ್ರೇರಣೆ, ಕಾವ್ಯ ಶೈಲಿ, ಕಾವ್ಯವಿಧ, ಕಾವ್ಯ ಸಂಕಲನ, ಕವನ ಸಂಕಲನಗಳ ಪರಿಚಯ ಮಾಡಿಕೊಡಲಾಗಿದೆ.)

**ಅಧ್ಯಾಯ- ನಾಲ್ಕು** : "ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯ ಧೋರಣೆ"ಗಳು- ಈ ಭಾಗದಲ್ಲಿ ಲಕ್ಷೆಟ್ಟಿಯವರ ಕಾವ್ಯ ವಸ್ತುವನ್ನು ಕುರಿತು ಹೇಳಲಾಗಿದೆ. ಅವು ನಿಸರ್ಗ, ಪ್ರೀತಿ-ಪ್ರೇಮ, ದಾಂಪತ್ಯ ಜೀವನದಲ್ಲಿ ಪ್ರೀತಿ ಬೆಸುಗೆ, ಸಾಮಾಜಿಕ ಚಿಂತನೆ, ಜನನಿ ಜನ್ಮ ಭೂಮಿ, ದಲಿತ ಹಾಗೂ ಬಂಡಾಯ ಧೋರಣೆಗಳು, ಭ್ರಷ್ಟಾಚಾರದ ಪರಮಾವಧಿ, ಶೋಷಣೆಯ ವಿಚಾರಧಾರೆ, ವ್ಯಕ್ತಿ ಚಿತ್ರಣ, ಸ್ತ್ರೀ ಮಹತ್ವ ಮತ್ತಿತರೆ ವಿಷಯಗಳ ಕುರಿತು ವಿಶ್ಲೇಷಣೆ ಮಾಡಲಾಗಿದೆ.)

**ಅಧ್ಯಾಯ- ಐದು** : ಸಮಾರೋಪ ಇದು ಕೊನೆಯ ಅಧ್ಯಾಯವಾಗಿದ್ದು, ಇಲ್ಲಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಲಕ್ಷೆಟ್ಟಿಯವರ ಸ್ಥಾನಮಾನ ಕುರಿತು ನಿರೂಪಿಸುವುದರೊಂದಿಗೆ, ಅವರ ಕಾವ್ಯ ಸಾಹಿತ್ಯದ ಒಟ್ಟು ವೈಶಿಷ್ಟ್ಯ ಹಾಗೂ ಸಾಹಿತ್ತಿಕ ಕೊಡುಗೆಯನ್ನು ಗುರುತಿಸಲಾಗಿದೆ.

ಹೀಗೆ ಅಧ್ಯಯನದ ವ್ಯಾಪ್ತಿಯು ಐದು ಅಧ್ಯಯಮಗಳಲ್ಲಿ ಹರಡಿಕೊಂಡಿದ್ದು ಶ್ರೀ ಬಾಳೇಶ ಲಕ್ಷೆಟ್ಟಿಯವರ ಕುರಿತು, ಪೂರಕವಾದ ಮಾಹಿತಿಯನ್ನು ಪ್ರಬಂಧದುದ್ದಕ್ಕೂ ಚರ್ಚಿಸಲಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯ ಜನಪದ ಸೊಗಡಿನಿಂದ ಕೂಡಿಕೊಂಡ ವಿಶಿಷ್ಟ ರಚನೆಗಳಾಗಿವೆ. ಅದಕ್ಕೆ ಅವರ ಕಾವ್ಯಗಳಲ್ಲಿರುವ ವಸ್ತುಗಳನ್ನು ತಿಳಿದುಕೊಳ್ಳುವ ಮೂಲಕ ಅವುಗಳಲ್ಲಿರುವ ಜೀವನ ಸಂದೇಶವನ್ನು ಅರಿತುಕೊಂಡು, ಸಮಾಜದ ನಡುವೆ ಬದುಕುವ ನಾವುಗಳು ಪರಿವರ್ತನೆಯಾಗುವುದು ಅಗತ್ಯ; ಅನಿವಾರ್ಯ. ಆದ್ದರಿಂದ ಒಬ್ಬ ಕವಿ ಕಾವ್ಯದ ಬ್ರಹ್ಮನೂ ಹೌದು, ಸಮಾಜವನ್ನು ಸುಧಾರಿಸುವ ಸಮಾಜ ಸುಧಾರಕನೂ ಹೌದು. ಶ್ರೀ ಲಕ್ಷೆಟ್ಟಿಯವರು ಅಧ್ಯಾಪಕರಾಗಿ ಮಕ್ಕಳಿಗೆ ಜ್ಞಾನದ ಎರಕಹೊಯಿದಂತೆ, ಕವಿಯಾಗಿ ಸಹೃದಯರಿಗೆ ಕಾವ್ಯನಾದದ ಎರಕ ಹೊಯಿದಿದ್ದಾರೆ. ಸಮಾಜದ ತಪ್ಪು ತಡೆಗಳನ್ನು ನೇರ-ದಿಟ್ಟ-ನಿರಂತರವಾಗಿ ಕಾವ್ಯ ರೂಪದಲ್ಲಿ ಸೆರೆ ಹಿಡಿಯುವ ಲಕ್ಷೆಟ್ಟಿಯವರ ಸಾಹಸ ಮೆಚ್ಚಲೇಬೇಕು. ಇವರ ಕವಿತೆಯ ಸಾಲುಗಳು ನ್ಯಾಯ, ನೀತಿ, ಧರ್ಮ ಹಾಗೂ ಸಮಾಜದ ಏಳಿಗೆಯನ್ನು ಬಯಸುವಲ್ಲಿ ರಚನೆಗೊಂಡಿವೆ ಎಂದು ಹೇಳಿದರೆ ತಪ್ಪೇನಲ್ಲ.

## ಅಧ್ಯಾಯ-ಎರಡು

## ಶ್ರೀ ಬಾಲೇಶ ಲಕ್ಷೆಟ್ಟಿಯವರ ಕಾವ್ಯದ ಹಿನ್ನೆಲೆ

ನವೋದಯ ಸಾಹಿತ್ಯದ ಸಾರಸ್ವತ ಲೋಕದಲ್ಲಿ ಬರವಣಿಗೆಯ ಛಾಪು ಮೂಡಿಸಿದವರಲ್ಲಿ ಶ್ರೀ ಬಾಳೇಶ ಲಕ್ಷೆಟ್ಟಿಯವರೊಬ್ಬರು. ೧೯೩೫ ಡಿಸೆಂಬರ ೨೦ ರಂದು ಗೋಕಾಕದಲ್ಲಿ ಜನಿಸಿದರು. ಶ್ರೀ ಶಂಕರೆಪ್ಪಾ ದುಂಡಮ್ಮಾ ದಂಪತಿಗಳ ಪುಣ್ಯುದರದಲ್ಲಿ ಹೆಮ್ಮೆಯ ಮಗನಾಗಿ ಕನ್ನಡಾಂಬೆಯ ಕಣ್ಮಣಿಯಾಗಿ ಲಕ್ಷೆಟ್ಟಿಯವರು ಜೀವತಳೆದರು. ಗೋಕಾಕದಲ್ಲಿ ಸ್ನಾತಕೋತರ ಪದವಿಯವರೆಗೆ ಅಧ್ಯಯನ. ಕನ್ನಡಿಗರಿಗೆ ಗೋಕಾಕ ಎಂದಾಕ್ಷಣವೇ ಕರ್ಣಪಟಲಕ್ಕೆ ಕೇಳಿಸುವುದೇ ಮೂರು ವಿಷಯಗಳು ಒಂದು ಗೋಕಾಕ ಕರದಂಟ, ಎರಡು ಗೋಕಾಕ ಜಲಪಾತ ಮೂರು ಬಾಳೇಶ ಲಕ್ಷೆಟ್ಟಿಯವರ ಕಾವ್ಯಕೃಷಿ. ಇವರ ಕಾವ್ಯ ಆ ಕರದಂಟಿನಂತೆ ಸಿಹಿ; ರುಚಿ, ಜಲಪಾತದಷ್ಟೆ ತೊರೆಯ ಧುಮುಕು: ವಿಸ್ತಾರ. ಇವರು ವಿದ್ಯಾರ್ಥಿ ದೆಸೆಯಿಂದಲೇ ಕಾವ್ಯ ಕೃಷಿ ಅರಂಭಿಸಿದ ಮೇಧಾವಿ. ಗೋಕಾಕ ಗಡಿಭಾಗದಂತಹ ಸ್ಥಳದಲ್ಲಿ ಕನ್ನಡದ ಗಟ್ಟಿ ಬೀಜಗಳನ್ನು ಬಿತ್ತಿ ಸಮೃದ್ಧ ಫಸಲು ಬೆಳೆಯುತ್ತಿರುವುದು ಇವರ ಸಾಮರ್ಥ್ಯಕ್ಕೆ ಮೀರಿದ ಸಂಗತಿನೇ ಸರಿ.

ಶ್ರೀ ಬಾಳೇಶ ಲಕ್ಷೆಟ್ಟಿಯವರಿಗೆ ಈಗ ೮೦ ವಯಸ್ಸು. ೮೦ ರ ಇಳಿ ವಯಸ್ಸಿನಲ್ಲೂ ೨೦ ರ ಹರೆಯನ್ನು ಮೈಗೂಡಿಸಿಕೊಂಡ ನವ ತರುಣನೀತ. ಬಾಳೇಶರ ದೇಹಕ್ಕೆ ವಯಸ್ಸು ಹೊರತು ಬರವಣಿಗೆಗಲ್ಲ. ಇಲ್ಲಿಯವರೆಗೆ ಹದಿನಾಲ್ಕು ಕವನ ಸಂಕಲನಗಳು ಪ್ರಕಟಗೊಂಡಿವೆ. ಕಥೆ, ಕಾದಂಬರಿ, ಕಾವ್ಯ, ಜೀವನ ಚರಿತ್ರೆ, ಸಮಾಜ ಚಿತ್ರ, ಮಕ್ಕಳ ಸಾಹಿತ್ಯ, ಅಂಕಣ-ಸಂಪಾದನ-ಪತ್ರ ಇತ್ಯಾದಿ. ಹೀಗೆ ವೈವಿಧ್ಯಮಯ ಸಾಹಿತ್ಯ ಪ್ರಕಾರಗಳಿಂದ ಇಂದಿಗೂ ಸಾಹಿತ್ಯ ಕೃಷಿಯನ್ನೇ ಉಸಿರಾಗಿಸಿಕೊಂಡಿರುವವರು ಶ್ರೀ ಬಾಳೇಶ ಲಕ್ಷೆಟ್ಟಿ. "ಬಸವಣ್ಣ ಅರುಹಿದೆಲ್ಲ ವಚನ, ಸಿದ್ದೇಶ್ವರ ಮಹಾಸ್ವಾಮಿಗಳು ಹೇಳಿದೆಲ್ಲ ಪ್ರವಚನ ಎನ್ನುವಂತೆ ಬಾಳೇಶರವರು ಬರೆದದೆಲ್ಲ ಕಾವ್ಯ ಸರೋವರ". ಬಾಳೇಶರು ಬದುಕಿದ್ದೆ ಕಾವ್ಯವಾಗಿ ಹರಿದು ಬಂದಿದೆ. ಕಾವ್ಯದ ಬದುಕನ್ನೆ, ಮೈಗೂಡಿಸಿಕೊಂಡು ಬದುಕನ್ನು ರಸವತ್ತಾಗಿಸಿಕೊಂಡ ಕವಿ ಲಕ್ಷೆಟ್ಟಿಯವರು.

## ೨.೧ ಮನೆತನದ ಹಿನ್ನೆಲೆ

ಬಾಳೇಶ ಲಕ್ಷೆಟ್ಟಿ ಅವರ ಪೂರ್ವಜರು ಇದೇ ಯಾದವಾಡ ಗ್ರಾಮದ ಮೂಲ ನಿವಾಸಿಗಳು. ವೀರಶೈವ ಬಣಜಿಗ ಕೋಮಿನವರು. ಅಂದರೆ ವ್ಯಾಪಾರ ಮೂಲವೃತ್ತಿಯ ಶೆಟ್ಟರು. ಶತ-ಶತಮಾನಗಳ ಹಿಂದೆ ಆ ಹಳೆಯ ಸೋವಿ ಕಾಲದಲ್ಲೇ ಬೆಳ್ಳಿ-ಬಂಗಾರದ ನಗ-ನಾಣ್ಯಗಳನ್ನು ಕುದುರೆಗಳ ಮೇಲೆ ಹೇರಿಕೊಂಡು, ಬಹಳ ದೂರದವರೆಗೆ ತಿರುಗಿ ಲಕ್ಷಗಟ್ಟಲೇ ವ್ಯಾಪಾರ-ವ್ಯವಹಾರ ಮಾಡುತ್ತಿದ್ದರು. ಆಗರ್ಭ ಶ್ರೀಮಂತರು ಲಕ್ಷಾಧೀಶರೂ ಆಗಿದ್ದುದರಿಂದ ಆ ಮನೆತನಕ್ಕೆ ಲಕ್ಷ್+ಶೆಟ್ಟಿ=ಲಕ್ಷೆಟ್ಟಿ ಹೆಸರು ಬಂದಿತೆಂದು ಪ್ರತೀತಿ. ಮುಂದೆ ಅದೇ ಆ ಮನೆತನದ ಅಡ್ಡ ಹೆಸರಾಗಿ ಆ ಪೀಳಿಗೆಯವರಿಗೆ ಉಳಿದು ಬಂತು. ಆ ಮನೆತನದ ಮೂಲ ಉದ್ಯೋಗ ಕೃಷಿ ಮತ್ತು ವ್ಯಾಪಾರಗಳು. ವೈಭವದಲ್ಲಿ ಮೆರೆದ ಪ್ರತಿಷ್ಠಿತ ಶ್ರೀಮಂತ ಮನೆತನ ಸುತ್ತೂ ಕಡೆ ಪ್ರಸಿದ್ಧಿ ಹೊಂದಿತ್ತು.

ಶರಣ ಶ್ರೀ ಶಿವಲಿಂಗಪ್ಪ-ಬಸಮ್ಮ ದಂಪತಿಗಳಿಗೆ ಬಾಳೇಶರ ತಂದೆ ಶ್ರೀ ಶಂಕರಪ್ಪ ಒಬ್ಬರೇ ಗಂಡು ಸಂತಾನ-ಶಂಕರಪ್ಪ ಅವರಿಗೆ ಸೌ। ದುಂಡವ್ವ ಎಂಬ ಸಾಧ್ವಿಯೊಡನೆ ಸಕಾಲದಲ್ಲಿ ಲಗ್ನ ಮಾಡಿದರು. ಯಾದವಾಡದಲ್ಲಿ ಒಣ ಬೇಸಾಯ ನೆಚ್ಚಿಕೊಂಡು ಬಾಳುವದೇ ಅಸಹನೀಯವಾದಾಗ-ಉದರ ನಿರ್ವಹಣೆಗೆ ಶ್ರೀ ಶಂಕರಪ್ಪನವರು ತಮ್ಮ ಧರ್ಮಪತ್ನಿಯೊಂದಿಗೆ ತಾರುಣ್ಯದಲ್ಲೇ, ಉದ್ಯೋಗವನ್ನರಿಸಿಕೊಂಡು ಗೋಕಾಕ ನಗರಕ್ಕೆ ಬಂದರು. ಗೋಕಾಕ- ದುಂಡವ್ವ ತಾಯಿಯ ತವರೂರು ಆಗಿತ್ತು. ದುಂಡವ್ವ ಶ್ರೀ ಚೆನ್ನಪ್ಪ ಪಟ್ಟಣಶೆಟ್ಟಿಯವರ ಮಗಳು.

ಯಾದವಾಡ ಗ್ರಾಮದಿಂದ ಗೋಕಾವಿ ಪಟ್ಟಣಕ್ಕೆ ಬದುಕನ್ನರಿಸಿಕೊಂಡು ಬಂದ ಬಾಳೇಶರ ತಂದೆ-ತಾಯಿಗಳು, ಬೀಗರ ಭಿಡೆ ಬೇಡವೆಂದು ಕೆಳಗಿನ ಪೇಟೆಯಲ್ಲಿ ಸಣ್ಣ ಬಾಡಿಗೆ ಮನೆ ಹಿಡಿದು ಸಂಸಾರ ಹೂಡಿದರು. ಶ್ರೀ ಶಂಕರಪ್ಪನವರು ಓದು ಬರೆಹ ಬಲ್ಲವರಾಗಿದ್ದು, ಗೋಕಾಕದ ಭುಸಾರಿ ದಲಾಲಿ ಅಂಗಡಿಗಳಲ್ಲಿ ಗುಮಾಸ್ತರಾಗಿ ಕೆಲಸವೊಂದನ್ನು ಸಂಪಾದಿಸಿಕೊಂಡರು.

ಬಾಳೇಶರ ತಂದೆ- ಬಾಳೇಶರಂತೆಯೇ ತನ್ನ ತಂದೆಗೆ ಒಬ್ಬನೇ ಗಂಡು ಮಗ. ಶ್ರೀ ಶಂಕರಪ್ಪ ತುಂಬ ಸರಳ ಪ್ರಾಮಾಣಿಕ ಕಾಯಕ ಜೀವಿ. ಮುಲ್ಕಿವರೆಗೆ ಶಿಕ್ಷಣ ಪಡೆದಿದ್ದ

---

೧.ಬಾಳೇಶ ಲಕ್ಷೆಟ್ಟಿ (ಬದುಕು ಬರಹ) – ಮಹಾಲಿಂಗ ಮಂಗಿ ಪು.೪
೨. ಕಾವ್ಯಚಿಂತನ – ಶ್ರೀಕಾಂತಶಾನವಾಡ ಪು.೧

ಅವರು ಜೀವನಾಂತ್ಯದವರೆಗೂ ದಲಾಲಿ ಅಂಗಡಿಗಳಲ್ಲಿ ಗುಮಾಸ್ತರಾಗಿ ಕಾರ್ಯ ನಿರ್ವಹಿಸುತ್ತಾ ಬಂದರು.

ತಮ್ಮ ಏಕೈಕ ಸುಪುತ್ರ ಬಾಳೇಶರಿಗೆ ತನ್ನ ಶಕ್ತಿ ಮೀರಿ ಶಿಕ್ಷಣ–ಸಂಸ್ಕಾರ ಬದುಕು ಕೊಟ್ಟ ಮಹಾನ್ ಜೀವಿ. ಸಂಕರಪ್ಪನವರಿಗೆ ವರ್ತಮಾನ ಪತ್ರ, ಆಧ್ಯಾತ್ಮಕ ಗ್ರಂಥ ಓದುವ ಹವ್ಯಾಸವೂ ಇತ್ತು. ಬಾಳೇಶರ ತಾಯಿ ದುಂಡಮ್ಮ ಹೃದಯವಂತ, ಮಮತಾಮಯಿ. ತನ್ನ ಜೀವನದ ಪ್ರತಿ ಕ್ಷಣವನ್ನೂ ಮಗನ ಬದುಕಿಗಾಗಿ ಧಾರೆ ಎರೆದಿದ್ದಾರೆ. ನಿಸ್ವಾರ್ಥ ಆದರ್ಶ ಮಹಾಮಾತೆ ಬಾಳೇಶರನ್ನು ಕಣ್ಮಣಿಯಂತೆ ನೋಡಿಕೊಂಡರು. ಮಗನ ಬಗ್ಗೆ ಆಕೆ ಅಂತಃಕರಣ ಉಪಚಾರಗಳನ್ನು ತ್ಯಾಗ ಸೇವೆಗಳನ್ನು ನಾನು ಪ್ರತ್ಯಕ್ಷ ಕಂಡಿದ್ದೇನೆ, ಮನಗಂಡಿದ್ದೇನೆ.

ಬಾಳೇಶರ ತಂದೆ ಶಂಕರಪ್ಪನವರು ಬಾಡಿಗೆ ಮನೆಯಿಂದ ಗುರುವಾರ ಪೇಟೆಯಲ್ಲಿ ಒಂದು ಸಣ್ಣ ಸ್ವಂತ ಮನೆಗೆ ವಾಸಕ್ಕೆ ಬಂದರು.

ಇದೇ ಮನೆಯಲ್ಲೇ ಬಾಳೇಶ ಹುಟ್ಟಿದ್ದು. ಅಂಬೆಗಾಲಿಕ್ಕಿದ್ದು, ತುಂಟಾಟವಾಡಿದ್ದು, ಓದುತ್ತ ಬೆಳೆಯುತ್ತ ಬರೆಯುತ್ತ ಸಾಹಿತ್ಯ ರಚಿಸಿದ್ದು ಇಂದೂ ಕೂಡ ಅದೇ ಹಳೆ ಕಾಲದ ಮನೆಯಲ್ಲೇ ವಾಸವಾಗಿದ್ದಾರೆ.

ಶಂಕರಪ್ಪ– ದುಂಡವ್ವ ದಂಪತಿಗಳಿಗೆ ಮೊದಲೊಂದು ಹೆಣ್ಣು ಮಗು ಜನಿಸಿದರೂ ಅದೇಕೋ ಬಹುಕಾಲ ಬಾಳಲಿಲ್ಲ. ಕೊನೆಗೆ ತವಗದ ಗುರು ಪೂಜ್ಯ ಶ್ರೀ ಬಾಳಯ್ಯ ಸ್ವಾಮಿಗಳ ಭಕ್ತಿ–ಆರಾಧನೆ ಫಲವಾಗಿ ೧೯೩೩ ಡಿಶಂಬರ ೨೦ ರಂದು ಗಂಡು ಮಗು ಜನಿಸಿತು. ತಪಸ್ವಿ ಶ್ರೀ ಬಾಳಯ್ಯನವರಂತೆಯೇ ಭಾಗ್ಯವಂತ ಆಯುಷ್ಯವಂತನಾಗಿ ಬಾಳಲಿ ಎಂದು ತಮ್ಮ ಕಂದ ಬಾಳನಿಗೆ ಗುರುಸ್ಮೃತಿಯಲ್ಲಿ 'ಬಾಳು, ಬಾಳಪ್ಪ, ಬಾಳೇಶ' ಎಂದು ಹೆಸರಿಟ್ಟು ಕರೆಯತೊಡಗಿದರು.

### ೨.೨ ಬಾಲ್ಯ ಮತ್ತು ಶಾಲಾ ಜೀವನ

ಬಾಳೇಶನಿಗೆ ಸುಮಾರು ಹತ್ತು ವರ್ಷ. ಅದೇ ಶಾಲೆ ಪ್ರವೇಶಿಸಿ ಮೂರು ವರ್ಷಗಳಾಗಿದ್ದವು. ಅವರ ಮನೆಗೆ ಅರ್ಧ ಕಿಲೋ ಮೀಟರ್‌ದಷ್ಟು ದೂರದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಶಾಖೆಯ ಚಟುವಟಿಕೆಗಳು ನಡೆಯುತ್ತಿದ್ದವು. 'ಚಂದ್ರಗುಪ್ತ' ಆ ಶಾಖೆಯ ಹೆಸರು. ತನ್ನ ಬಾಲ್ಯ ಮಿತ್ರರೊಂದಿಗೆ ಆಡಲು ಕುತೂಹಲದಿಂದ ಶಾಖೆಗೆ ಹೋಗುತ್ತಿದ್ದರು. ಹಿರಿಯ ಸ್ವಯಂ ಸೇವಕರು ಬಾಲಕ ಬಾಳೇಶನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ದಿನವೂ ಸಂಜೆ ತಪ್ಪದೆ ಶಾಖೆಗೆ ಹೋಗುವುದು. ಇತರ

ಬಾಲಕರೊಂದಿಗೆ ಶಿಸ್ತಿನಿಂದ ಸಾಲಾಗಿ ನಿಂತು ಕವಾಯಿತು, ಕಸರತ್ತು ಮಾಡುವುದು. ಶಾರೀರಿಕ ಅಂಗ ಸಾಧನೆ ವ್ಯಾಯಾಮ ಆಸನಗಳನ್ನು ಅಲ್ಲಿ ಕಲಿಸಲಾಗುತ್ತಿತ್ತು. ಕ್ರಮಬದ್ಧ ಶಿಸ್ತಿನ ಜೀವನ ಆಟೋಟಗಳು, ಇವರ ಆರೋಗ್ಯಕ್ಕೆ ಸಾಧನಗಳಾದರೆ, ಅಲ್ಲಿ ಹೇಳಿ ಕೊಡಲಾಗುತ್ತಿದ್ದ ದೇಶ ಭಕ್ತಿಗೀತೆ-ಕತೆಗಳು, ಸ್ಫೂರ್ತಿದಾಯಕ ಉಪನ್ಯಾಸಗಳು ಎಳೆಯ ಬಾಳೇಶರ ಮನಸ್ಸಿನ ಮೇಲೆ ಒಳ್ಳೆಯ ಸಂಸ್ಕಾರ ನೀಡುವದರೊಂದಿಗೆ ಬಾಳಿಗೊಂದು ಶಿಸ್ತು-ಸಂಕಲ್ಪ ಶಕ್ತಿ ಆತ್ಮಮನೋಬಲ ಒದಗಿಸಿಕೊಟ್ಟವು.

ಬಾಳೇಶರ ಬಾಲ್ಯದ ದಿನಗಳು ತೃಪ್ತಿ- ನೆಮ್ಮದಿಯಿಂದ ಕೂಡಿದ್ದವು. "ಮನೆಯಲ್ಲಿ ಬಡತನವಿತ್ತು. ಆದರೆ ಆ ಕೊರತೆ-ಕೊರಗುಗಳು ತಮಗೆ ತಟ್ಟಗೊಡಲಿಲ್ಲ ತನ್ನ ಹೆತ್ತವರು" ಎನ್ನುತ್ತಾರೆ ಬಾಳೇಶರು.

ಬಾಳೇಶರ ಬೆನ್ನು ಹಿಂದೆಯೇ ತಂಗಿಯೊಬ್ಬಳು ಹುಟ್ಟಿ ಬಂದಳು. ಆ 'ಗಂಗಾ' ಬಾಳೇಶರ ಬಾಲ್ಯದ ಒಡನಾಡಿ, ಅಚ್ಚುಮೆಚ್ಚು ಆಗಿದ್ದವಳು ತಾರುಣ್ಯದಲ್ಲೇ ಆಕೆ ಅಸು ನೀಗಿದಳು. ತನ್ನ ಪ್ರೀತಿಯ ತಂಗಿಯನ್ನು ಕಳೆದುಕೊಂಡಿದ್ದು ತೀವ್ರ ಆಘಾತವನ್ನುಂಟು ಮಾಡಿತು. ಬಾಳೇಶರಿಗೆ ತಾನು ಕಳೆದುಕೊಂಡ ತಂಗಿಯ ನೆನಪನ್ನು ತನ್ನ ಸ್ಮೃತಿ ಪಟಲದಿಂದ ಇನ್ನೂ ಅಳಿಸಲಾಗಿಲ್ಲ. ಅಲ್ಲಿನ್ನು ಆಕೆ ಜೀವಂತವಾಗಿದ್ದಾಳೆ. ಸ್ಫೂರ್ತಿಯಾಗಿದ್ದಾಳೆ. ತನ್ನ ದಿವಂಗತ ತಂಗಿಯ ನೆನಪಿಗೆ ತಮ್ಮ ಮನೆಗೆ 'ಗಂಗಾ ನಿಲಯ'ವೆಂದು ಕರೆದು ಆ ಪ್ರೀತಿಯನ್ನು ಜೀವಂತಿಕೆಯಿಂದ ಕಾಪಾಡಿಕೊಂಡಿದ್ದಾರೆ.

'ಗಂಗಾ'ಳ ನಂತರ ಬಾಳೇಶರಿಗೆ ಮತ್ತೂ ಇಬ್ಬರು ತಂಗಿಯರು ಹುಟ್ಟಿದರು. (ಸೌ. ಮಹಾದೇವಿ ಮತ್ತು ಸೌ. ಶಾಂತಾ) ಅವರಿಬ್ಬರೂ ಇಂದು ಶಿಕ್ಷಣ ಮುಗಿಸಿ ಮದುವೆಯಾಗಿ ತುಂಬು ಸಂಸಾರ ನಡೆಸಿದ್ದಾರೆ.

ಬಾಳೇಶರ ಬಾಲ್ಯದ ದಿನಗಳು ಮತ್ತೂ ಎರಡು ಕಾರಣಗಳಿಂದ ಮಹತ್ವದ್ದಾಗಿರುತ್ತವೆ. ಅಂದು ಅವು ಪಾರತಂತ್ರ್ಯದ ದಿನಗಳು. ರಾಷ್ಟ್ರವ್ಯಾಪಿ ಚಳುವಳಿ ಸತ್ಯಾಗ್ರಹಗಳು ನಡೆದಿದ್ದವು.

ಮತ್ತೊಂದು-ಎರಡನೆಯ ಮಹಾಯುದ್ಧ ಜರುಗಿದ್ದು. ರಾಷ್ಟ್ರೀಯ ಕಾಂಗ್ರೆಸ್ಸಿನ ಸೇವಾ ದಳಗಳು ಆಗ ಬೆಳಿಗ್ಗೆ ದೇಶ ಭಕ್ತಿ ಗೀತೆ ಹಾಡುತ್ತ ಊರೆಲ್ಲ ಪ್ರಭಾತ ಫೇರಿ ಬರುತ್ತಿದ್ದ ದೃಶ್ಯ ಈಗಲೂ ನೆನಪಿದೆ. ಆದರೆ ಅದಕ್ಕಿಂತ ಹೆಚ್ಚಿನದು ಅವರಿಗೆ

---

೧.ಬಾ.ಲ.(ಬ.ಬ.)- ಮಹಾಲಿಂಗ ಮಂಗಿ ಪು.೬.೭

ಅರ್ಥವಾಗುತ್ತಿರಲಿಲ್ಲ. ಬಾಳೇಶರು ಮಾತೆಯ ವಾತ್ಸಲ್ಯದ ಸೆರಗಿನಲ್ಲಿ ತಂದೆಯ ರಕ್ಷಣೆಯ ಕಣ್ಣಳತೆಯಲ್ಲೇ ಬೆಳೆದು ಬಂದರು. ಆ ಎಳೆಯ ವಯದ ದಿನ-ಕ್ಷಣ ಹಿರಿಯರ ಕಕ್ಕುಲತೆ-ಅಂತಃಕರಣ ನೆನೆದಾಗ ಭಾವ ಪರವಶರಾಗಿ ಬಾಳೇಶರು ಹನಿಗಣ್ಣಾಗುತ್ತಾರೆ.

೧೯೪೧ರಲ್ಲಿ ಬಾಳೇಶರನ್ನು ಅವರ ಪಾಲಕರು, ತಮ್ಮ ಮನೆಯ ಸಮೀಪದ ಗೋಕಾಕದ ೩ನೇ ನಂಬರಿನ ಕನ್ನಡ ಶಾಲೆಗೆ ದಾಖಲು ಮಾಡಿದರು. ಕೆಳಗಿನ ಪೇಟೆಯ ಈ ಶಾಲೆಗೆ ಶ್ರೇಷ್ಠ ಗುರುಜನಗಳಿಂದಾಗಿ ಒಳ್ಳೇ ಹೆಸರಿತ್ತು. ಬಾಳೇಶರು ಮೊದಲು ಪ್ರವೇಶ ಪಡೆದದ್ದು ಬಿನ್ನೆತ್ತೆಗೆ. ಅಂದರೆ ೧ ನೇ ಇಯತ್ತೆ ಪೂರ್ವದ ಬಿನ್ (ಅಂಖೆಯಿಲ್ಲದ - ಹುಸಿ) ಇಯತ್ತೆ. ಬಾಳೇಶರು ಬಿನ್ನೆತ್ತೆಯಿಂದ ೪ನೇ ಇಯತ್ತೆವರೆಗೆ ೫ ವರ್ಷ ಈ ಶಾಲೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಾರೆ.

ಪ್ರಾತಃಸ್ಮರಣೀಯರಾದ ಬಾ.ಮ.ಯರಗಟ್ಟಿ, ಗಂಗಾಧರ ದತ್ತಾತ್ರೇಯ ಮಾಹಜನ, ಪಿ.ಬಿ.ದೇವರೆಡ್ಡಿ ಮತ್ತು ಬಾಳಯ್ಯ ಸ್ವಾಮಿ ಗಣಾಚಾರಿ (ಮುಖ್ಯೋಪಾಧ್ಯಾಯರು) ಬಾಳೇಶರಿಗೆ ಗುರುಗಳಾಗಿದ್ದರು. ಶ್ರೀ ಬಾ.ಮ. ಯರಗಟ್ಟಿ, ಶ್ರೀ ಮಹಾಜನ ಮಾಸ್ತರರು ಪಂಡಿತರೂ, ಮೇಧಾವಿಗಳೂ ಸಾಹಿತ್ಯ ಕೃತಿ ನೀಡಿದ ಲೇಖಕರೂ ಆಗಿದ್ದರು. ದೇವರೆಡ್ಡಿ ಮಾಸ್ತರರು ಓರ್ವ ಆದರ್ಶ ಶಿಕ್ಷಕರು. ಹೆಡ್ ಮಾಸ್ತರ ಬಾಳಯ್ಯಸ್ವಾಮಿ ಗಣಾಚಾರಿ ಕಠೋರ ಶಿಸ್ತಿನ ಗುರುಗಳು.

ಅಂತಹ ಗುರುಗಳು ಉಳಿಯ ಪೆಟ್ಟಿನಿಂದ ಕೆತ್ತಿ ಕಡೆದು ತಮ್ಮನ್ನು ಮೂರ್ತಿಯಾಗಿ ರೂಪಿಸಿದರು. ತಮ್ಮ ಭಾಷಾಶುದ್ಧಿಬೆಳೆಯಲು ಶ್ರೀ ಬಾ. ಮ. ಯರಗಟ್ಟಿ ಗುರುಗಳು ಕಾರಣವಾದರೆ, ಕರೆ ಹಲಗೆಯ ಮೇಲೆ ಮುತ್ತಿನಂಥ ಅಕ್ಷರ ಮೂಡಿಸುತ್ತಿದ್ದ ಶ್ರೀ ದೇವರೆಡ್ಡಿ ಮಾಸ್ತರರು ತಾವು ಅಕ್ಷರಗಳನ್ನು ದುಂಡಾಗಿ ಸುಮದುರವಾಗಿ ಬರೆಯಲು ಪ್ರೇರಣೆಯಾದರು ಎಂದೆನ್ನುವ ಬಾಳೇಶರು ತಮಗೆ ಮೂಲಾಕ್ಷರ ಕಲಿಸಿ ಪ್ರಾಥಮಿಕ ಜ್ಞಾನವಿತ್ತ ಗುರುಗಳನ್ನು ಈ ಜನ್ಮದಲ್ಲಿ ಮರೆಯಲು ಸಾಧ್ಯವೇಯಿಲ್ಲವೆಂದು ಭಾವುಕತೆಯಿಂದ ಬಣ್ಣಿಸುತ್ತಾರೆ.

ಬಾಳೇಶರಿಗೆ ಬಾಲ್ಯದ ಸಹಪಾಠಿ- ವಾರಿಗೆಯ ಗೆಳೆಯರು ಹಲವಾರು ಜನರು. ಸರ್ವಶ್ರೀ ವಿಠ್ಠಲ ಹಟ್ಟಿ, ಬಾಳಪ್ಪ ಪುರವಂತ, ಘಮಾಣಿ, ಹಳದೋಡಿ ಮೊದಲಾದವರು ಇಂದೂ ಆತ್ಮೀಯ ಮಿತ್ರರಾಗಿಯೇ ಉಳಿದಿದ್ದಾರೆ.

ವಾರಿಗೆಯ ಗೆಳೆಯರೊಂದಿಗೆ ಸಾಕಷ್ಟು ಅಲೆದಾಟ ಮಾಡಿದ್ದಾರೆ. ಅಟಗಳನ್ನು ಆಡಿದ್ದಾರೆ. ಕಬ್ಬಡ್ಡಿ, ಗಿಡಮಂಗ್ಯಾನಾಟ, ಚಿಣಿಪಣಿ, ಗೋಲಿ ಗುಂಡ.. ..ಅಂತ ಆಗೆಲ್ಲ ಅವರು ಆಡಿದ್ದು ಸುಲಭದ ದೇಶಿ ಆಟಗಳನ್ನೇ!

ಉಸುಕಿನ ಹೊಳೆಯಲ್ಲಿ ನೀರಾಡ ಆಡುವುದು ಭಾರಿ ಮೋಜು. ನದಿ ತೀರ ತಿರುಗುವುದು, ಗುಡ್ಡ ಬೆಟ್ಟ ಏರುವುದು, ಪೇಟೆ ಸುತ್ತುವದು ಹೀಗೆ ಬಾಲ್ಯ ಸಹಜ ಹುಡುದಿಯ–ಹುಡುಗಾಟದ ದಿನಗಳು ಆದರೂ ಅವು ಸುಂದರ ಮಧುರ ಕ್ಷಣಗಳು–ಪಾಠಕ್ಕಿಂತ ಆಟದಲ್ಲೇ ಆಕರ್ಷಣೆ.

ಆ ಸಣ್ಣ ವಯಸ್ಸಿನಲ್ಲೂ ಬಾಳೇಶರದು ಸ್ವಾವಲಂಬಿ ಶಿಸ್ತಿನ ಜೀವನ, ತನ್ನ ಬಟ್ಟೆ ತಾನೇ ಒಗೆದುಕೊಂಡು ಸರಿಯಾಗಿ ಮಡಚಿ ತಲೆದಿಂಬಿನಡಿಯಿಟ್ಟುಕೊಂಡು ಈ ಬಗೆಯಲ್ಲಿ ಇಸ್ತ್ರೀ ಮಾಡಿ ತೊಟ್ಟುಕೊಳ್ಳುತ್ತಿದ್ದರು.

ಆಟ ಹುಡುಗಾಟಗಳಲ್ಲೇ ಬಾಳೇಶರು ನಾಲ್ಕನೇ ಇಯತ್ತೆಯನ್ನು ೩ನೇ ನಂಬರಿನ ಶಾಲೆಯಲ್ಲಿ ಮುಗಿಸಿದರು.

### ೨.೩ ಮಾಧ್ಯಮಿಕ ಶಿಕ್ಷಣ ಹಾಗೂ ಕಾಲೇಜಿನ ದಿನಗಳು

ನಾಲ್ಕನೇ ಇಯತ್ತೆ ಪಾಸಾದ ಅನಂತರ ೫ನೇ ಇಯತ್ತೆಗೆ ಬಾಳೇಶರ ಗೆಳೆಯರು ಕೆಲವರು ಮುನ್ಸಿಪಲ್ ಹಾಯಸ್ಕೂಲಿಗೆ ಹೆಸರು ಹಚ್ಚಲು ತಯಾರಾದರು. ಊರ ಹೊರಗೆ ನದಿ ದಂಡೆಯ ಮೇಲಿನ ಈ ಹಾಯಸ್ಕೂಲಿಗೆ ಸೇರಲು ಬಾಳೇಶರಿಗೂ ಆಶೆ.

ಸರಕಾರಿ ಕನ್ನಡ ಶಾಲೆಯಲ್ಲಿ ೭ ನೇ ಇಯತ್ತೆವರೆಗೂ ಉಚಿತ ಶಿಕ್ಷಣ. ಮುನ್ಸಿಪಲ್ ಶಾಲೆಯಲ್ಲಾದರೆ ಶುಲ್ಕ ತೆರಬೇಕು. ಬಾಳೇಶರ ತಂದೆಗೆ ತಮ್ಮ ಮಗ ಇಲ್ಲೇ ಕನ್ನಡ ಶಾಲೆಯಲ್ಲೇ ಮುಲ್ಕಿವರೆಗೆ ಓದಿದರೆ ಸಾಕು, ಮುಂದೆ ಎಲ್ಲಿಯಾದರೂ ಹೇಳಿ ಗುಮಾಸ್ತ ಕೆಲಸ ಕೊಡಿಸಬಹುದೆಂದು ಲೆಕ್ಕಾಚಾರವಾದರೆ, ತಾಯಿಗೆ ತನ್ನ ಮಗ ಇನ್ನೂ ಸಣ್ಣ ಇಲ್ಲೇ ಮನೆ ಹತ್ತಿರದ ಶಾಲೆಯಲ್ಲಿ ಕಲಿತರೆ ಸಾಕು ದೂರದ ಹಾಯಸ್ಕೂಲಿಗೆ ಏಕೆ ಹೋಗಬೇಕಂತ ಕಳಕಳಿ. ಆದರೆ ಹುಡುಗನದು ಒಂದೇ ಹಠ.

ಆಗ ಅದೇ ಓಣಿಯಲ್ಲಿ ಶ್ರೀ ರುದ್ರಪ್ಪ ಚನ್ನಮಲ್ಲಪ್ಪ ಪಾಟೀಲ ಎಂಬ ಮುನ್ಸಿಪಾಲಿಟಿ ಸದಸ್ಯರೂ, ಗಣ್ಯರೂ ಕುಟುಂಬದ ಹಿತೈಷಿಗಳೂ ಆಗಿದ್ದವರು ಇವರ ಮನೆಗೆ ಬಂದಾಗ ಅವರ ಮುಂದೆ ಬಾಲಕ ಬಾಳೇಶನ ಹಾಯಸ್ಕೂಲ ಓದಿನ ತಕರಾರು ಪ್ರಸ್ತಾಪವಾಯ್ತು ಆ

---

೪. ಏಣಿ(ಡಾ.ಲ.ಅಭಿನಂದನ ಗ್ರಂಥ)–ಸಂ.ಡಾ.ಎಚ್.ಆಯ.ತಿಮ್ಮಾಪೂರ ಪು.೩

ಮಾತಿಗೆ ಪಾಟೀಲರು "ಹುಡುಗ ಬುದ್ಧಿವಂತ ಅದಾನು, ಹಾಯಸ್ಕೂಲಿನ್ಯಾಗ, ಕಲೀತಾನಂತ ಆಶಾ ಪಟ್ಟಾನ, ನೀವ್ಯಾಕ ನಿರಾಶೆ ಮಾಡತೀರಿ, ನಿಮಗ ಆ ಖರ್ಚು ನೀಗದಿದ್ದರೆ ಆ ಹೊರೆ ನನಗಿರಲಿ" ಎಂದ್ಹೇಳಿ ತಂದೆ ತಾಯಿಗಳ ಮನವೊಲಿಸಿದರು. ಬಾಳೇಶ ಲಕ್ಷೆಟ್ಟಿ ೫ನೇ ಇಯತ್ತೆಗೆ ಹಾಯಸ್ಕೂಲಿಗೆ ಅಡಿಯಿಡಲು ಅವರು ಕಾರಣಕರ್ತರಾದರು. ಹೀಗೆ ಆರ್.ಸಿ.ಪಾಟೀಲರು ಆ ಮೂಲಕ ತಮ್ಮ ಶಿಕ್ಷಣ ವಿದ್ಯಾಭ್ಯಾಸಕ್ಕೆ ಒಂದು ತಿರುವನ್ನೇ ಕೊಟ್ಟರೆಂದು ಬಾಳೇಶರು ಕೃತಜ್ಞತೆಯಿಂದ ನೆನೆಯುತ್ತಾರೆ.

ಮುನಸಿಪಲ್ ಸ್ಕೂಲ ಪ್ರವೇಶ ಬಾಳೇಶರ ಬದುಕಿನಲ್ಲಿ ಹೊಸ ಅಧ್ಯಾಯ ಬರೆಯಿತು. ಹತ್ತರಲ್ಲೊಬ್ಬನಾಗಿದ್ದ ಬಾಳೇಶ ಇಲ್ಲಿ ವರ್ಗಗಳಲ್ಲಿ ಪ್ರತಿವರ್ಷ ಪ್ರಪ್ರಥಮರಾಗಿ ತೇರ್ಗಡೆಯಾಗುತ್ತ ಬಂದರು. ಇಲ್ಲಿ ಮುಂದುವರೆದ ಪ್ರತಿಷ್ಠಿತ ವಿದ್ಯಾರ್ಥಿಗಳ ಸಹವಾಸ, ತಜ್ಞ ಶಿಕ್ಷಕರ ಪಾಠ ಪ್ರವಚನಗಳಿಂದ ಅವರಲ್ಲಿದ್ದ ಸುಪ್ತ ಪ್ರತಿಭೆ ವಿಕಸಿತಗೊಳ್ಳುತ್ತ ಸಾಗಿತು. ೫ನೇ ಇಯತ್ತೆಯಿಂದ ೯ನೇ ಇಯತ್ತೆವರೆಗೂ ಅವರು ತಮ್ಮ ಮೊದಲ ನಂಬರನ್ನು ಓದಿನಲ್ಲಿ ಬಿಟ್ಟು ಕೊಡಲಿಲ್ಲ.

ಎಸ್.ಎಸ್.ಸಿ ಪಾಸಾಗುವವರೆಗೂ ಬಾಲ್ಯ ಜೀವನ ತೀರ ಸಾದಾ. ಖಾಕಿ ಹಾಫ್ ಪ್ಯಾಂಟ್, ಅರ್ಧ ತೋಳಿನ ಬಿಳೇ ಶರ್ಟ್, ತಲೆಯ ಮೇಲೊಂದು ಗಾಂಧೀ ಟೊಪ್ಪಿಗೆ ಇದು ನಿತ್ಯದ ವೇಷವಾಗಿತ್ತು. ಕಾಲೇಜಿಗೆ ಸೇರಿದ ಮೇಲೆಯೇ ಉದ್ದ ತೋಳಿನ ಶರ್ಟು ಪಾಯಿಜಾಮಾ ತೊಟ್ಟಿದ್ದು.

ಬಾಳೇಶ ಲಕ್ಷೆಟ್ಟಿ ಮುನಸಿಪಲ್ ಹಾಯಸ್ಕೂಲಿಗೆ ಆಗ ತಾಲೂಕಿನಲ್ಲಿ ಒಳ್ಳೆ ಹೆಸರು ಇತಿಹಾಸವಿತ್ತು. ನಾಡಿನ ಖ್ಯಾತ ಸಾಹಿತಿ ಕೃಷ್ಣಮೂರ್ತಿ ಪುರಾಣಿಕರು ಅದೇ ಹಾಯಸ್ಕೂಲಿನಲ್ಲಿ ಸೇವೆ ಸಲ್ಲಿಸುತ್ತಿದ್ದರು.

ಹಾಗೆಯೇ ಸರ್ವಶ್ರಿ ಪಿ.ಟಿ.ಕುಲಕರ್ಣಿ (ಕನ್ನಡ), ಜೋಶಿ, ಎಸ್.ಸಿ.ಪಾಟೀಲ (ಇಂಗ್ಲೀಷ) ಪಟ್ಟದದೇವರು, ಸಾಂಗಲಿ)ಸಂಸ್ಕೃತ), ಸವದಿ(ಗಣಿತ) ಮುಚ್ಚಂಡಿಮಠ(ವಿಜ್ಞಾನ) ದೀಕ್ಷಿತ(ಇತಿಹಾಸ), ವ್ಹಿ.ಎಸ್.ಪದಕಿ (ಭೂಗೋಲ), ಭೋಸಲೆ(ಶಾರೀರಿಕ), ಹೀಗೆ ಎಲ್ಲ ಗುರುಗಳು ಅಸಾಧಾರಣರು. "ಪಾಠಗಳು ಕಂಠಪಾಠ, ಜೀವ ಭಾವ ದುಂಬಿ, ಸಾಭಿನಯಪೂರ್ವಕ ಪಾಠ ಹೇಳುತ್ತಿದ್ದ ಶ್ರೀ ಜೋಶಿಯವರ ಚಿತ್ರ ಇನ್ನೂ ಕಣ್ಮುಂದೆ ಕಟ್ಟಿದಂತಿದೆ" ಎನ್ನುತ್ತಾರೆ ಇಂದಿನ ನಿವೃತ್ತ ಶಿಕ್ಷಕ ಬಾಳೇಸರು. ಬಾಳೇಶರ ಹಾಯಸ್ಕೂಲಿನ ದಿನಗಳು ಬಡತನದಿಂದ ಕೂಡಿದ್ದರೂ ಪಾಲಕರ ಅಖಂಡ ಪ್ರೀತಿ, ಗುರುಗಳ ಪ್ರೋತ್ಸಾಹ-ಮಾರ್ಗದರ್ಶನಗಳಿಂದ ಅವರ ಪ್ರತಿಭೆ ಅರಳತೊಡಗಿತು.

ಅಧ್ಯಯನದಲ್ಲಿ ಅಭಿರುಚಿ, ವಿದ್ಯಾರ್ಜನೆಯಲ್ಲಿ ಆಸಕ್ತಿಗಳು ಬೆಳೆದು ಬಂದವು. ಬಹಳ ಸಾದಾ ಸರಳ ಜೀವನ-ಅವರೆಂದೂ ಹೊಟೇಲುಗಳಲ್ಲಿ ಕಾಲಿಕ್ಕಿರಲಿಲ್ಲ. ಅಷ್ಟೇ ಅಲ್ಲ ಯಾವೊಂದು ದುರಭ್ಯಾಸಗಳನ್ನೂ ಸಮೀಪ ಸುಳಿಯಗೊಟ್ಟಿರಲಿಲ್ಲ. ಅಷ್ಟು ಚೊಕ್ಕ ಸಾತ್ವಿಕ ಜೀವನ ಶೈಲಿ-ನಿರಾಡಂಬರ ಬದುಕು ರೂಢಿಸಿಕೊಂಡ ಆದರ್ಶ ವಿದ್ಯಾರ್ಥಿ ಆಗಿದ್ದರು. ಆಟಗಳಿಗಿಂತ ಪಾಠಗಳಲ್ಲೇ ಆಸಕ್ತಿ. ವ್ಯಾಸಂಗ ವಿದ್ಯಾರ್ಜನೆಯ ಹಂಬಲ-ಹಸಿವು ಬೆಳೆಯುತ್ತ ಬಲಿಯುತ್ತ ಬಂತು.

ಹಾಗೆ ಪ್ರತ್ಯಕ್ಷ ಪ್ರಯೋಗ ಅನುಭವಗಳಿಂದ ತಮ್ಮ ವ್ಯಕ್ತಿತ್ವ ರೂಪುಗೊಂಡಿತೆಂದು, ಬಾಳೇಶರು ತಮ್ಮ ಮಾಧ್ಯಮಿಕ ಶಾಲೆಯ ಸ್ಫೂರ್ತಿದಾಯಕ ದಿನಗಳನ್ನು ಮೆಲುಕು ಹಾಕುತ್ತಾರೆ. ತನ್ನ ಶಾಲೆ-ಕ್ಲಾಸ-ಶಿಕ್ಷಕರು, ಸಹಪಾಠಿಗಳು, ಪಾಠ-ಪ್ರವಚನಗಳು ಎಲ್ಲವನ್ನೂ ಅವರು ನೆನಪಾಗಿ ಉಳಿಸಿಕೊಂಡಿದ್ದಾರೆ. ೯ನೇ ವರ್ಗದಲ್ಲಿದ್ದಾಗ ವಿಜ್ಞಾನ ವಿಷಯದಲ್ಲಿ ಅವರಿಗೆ ೯೮% ಅಂಕಗಳು ಬಂದವು ಅತ್ಯುತ್ತಮ ಶರಾ ಬರೆದು ಗುರುಗಳು (ಶ್ರೀ ಮುಚ್ಚಂಡಿಮಠರು) ಕ್ಲಾಸಿನಲ್ಲಿ ಆ ಉತ್ತರ ಪತ್ರಿಕೆ ಎತ್ತಿ ಹಿಡಿದು ತೋರಿಸುತ್ತ ಬಾಳೇಶರ ಬುದ್ಧಿವಂತಿಕೆಯ ಗುಣಗಾನ ಮಾಡಿದರು. ಆ ಷಣ್ಮಾಸಿಕ ಪರೀಕ್ಷೆಯ ಉತ್ತರ ಪತ್ರಿಕೆಯನ್ನು ಬಾಳೇಶರು ಬಹುಕಾಲ ಕಾಯ್ದಿಟ್ಟುಕೊಂಡು ಅಭಿಮಾನ-ಆನಂದ ಅನುಭವಿಸುತ್ತಿದ್ದರು.

ಆಗಿನ ವಿದ್ಯಾರ್ಥಿ ಬಾಳೇಶರಿಗೆ ತಾವು ಸಹಿತ್ಯ ರಚಿಸಬೇಕು. ಸಾಹಿತಿ ಆಗಬೇಕು ಎಂಬ ಕನಸು-ಕಲ್ಪನೆ ಇರಲೇ ಇಲ್ಲ. ಆದರೆ ಆಗಷ್ಟೇ ಬಾಳೇಶರಲ್ಲಿ ಸಾಹಿತ್ಯ ಕೃತಿ ಓದುವ ಅಭಿರುಚಿ ಮೂಡತೊಡಗಿತ್ತು. ಖ್ಯಾತ ಸಾಹಿತಿ ಕೃಷ್ಣಮೂರ್ತಿ ಪುರಾಣಿಕರನ್ನು ನೋಡುವ, ಆಗಾಗ ಅವರ ಪಾಠ ಪ್ರವಚನ ಕೇಳುವ ಅವಕಾಶ ಬರುತ್ತಿದ್ದವು. ಅವರು ಬರೆದ ಕೆಲವು ಪುಸ್ತಕ ಓದಿದ್ದರು. ಅದೇ ಪ್ರಕಟವಾಗಿದ್ದ "ರಾಮನ ಕತೆಗಳು" ಓದಿದಾಗ ಬಹಳ ಹಿಡಿಸಿತು. ಪುರಾಣಿಕರಲ್ಲಿ ವಿಶೇಷ ಗೌರವಾದರ ಮೊದಲು ಕಾರಣವಾಯ್ತು. ಪುರಾಣಿಕರ ಭಾಷಣ, ಕವಿತಾ ವಾಚನ, ಸರಳರಗಳೆ ನಾಟಕ ಓದುವದನ್ನು ಕೇಳಿದಾಗ ಬಾಲಕ-ಬಾಳೇಶರು ಪುಳಕಿತರಾಗುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಮಾತ್ರ ಆಗಾಗ ತಾನೂ ಅವರಂತೆ ಬರೆಯಬೇಕು-ಆಗಬೇಕು ಅಂತ ಅನಿಸುತ್ತಿತ್ತು.

ಜ್ಞಾನಪೀಠ ಪ್ರಶಸ್ತಿವಿಜೇತ ಡಾ. ಚಂದ್ರಶೇಖರ ಕಂಬಾರ ಬಾಳೇಶರಿಗಿಂತ ಒಂದು ಕ್ಲಾಸು ಹಿಂದೆ. ಆ ಎಳೆಯ ಚಂದ್ರುವಿನೊಂದಿಗೆ ಗೆಳೆತನ. ಇವರ ಮನೆಗೂ ಬರುತ್ತಿದ್ದರು. ಒಟ್ಟಿಗೆ ಕೃಷ್ಣಮೂರ್ತಿ ಪುರಾಣಿಕ ಮನೆಗೂ ಹೋಗುತ್ತಿದ್ದರು.

ಬಾಳೇಶರ ಕಾಲಕ್ಕೆ ೧೧ನೇ ಇಯತ್ತೆ- ಎಸ್ ಎಸ್ ಸಿ ಪರೀಕ್ಷೆ ಆಗ ಪುಣಾ ಬೋರ್ಡ್ ಮೂಲಕ ನಡೆಯುತ್ತಿತ್ತು. ಪರೀಕ್ಷೆ ಕಟ್ಟಲು ಧಾರವಾಡ ಅಥವಾ ಬೆಳಗಾವಿಗೆ ಹೋಗಬೇಕಾಗಿತ್ತು. ಬಾಳೇಶರು ನಿಗದಿತ ವಿಷಯಕ್ಕಿಂತ ಹೆಚ್ಚಿನ 'ಪೌರನೀತಿ' ವಿಷಯವೊಂದನ್ನು ತೆಗೆದುಕೊಂಡು ಧಾರವಾಡಕ್ಕೆ ಹೋಗಿ ಎಸ್ ಎಸ್ ಸಿ ಪರೀಕ್ಷೆ ಕಟ್ಟಿದರು.ಪ್ರಥಮ ಪ್ರಯತ್ನದಲ್ಲೇ ಉತ್ತಮ ಯಶಸ್ಸು ಪಡೆದರು. ಬಾಳೇಶರಂತಹ ಜನ ಸಾಮಾನ್ಯರಿಗೆ ಆಗಿನ ಕಾಲದಲ್ಲಿ ಎಸ್ ಎಸ್ ಸಿಪರೀಕ್ಷೆ ಪಾಸು ಮಾಡುವುದು ಭಾರೀ ಸಾಧನೆ. ಮನೆಯವರೆಲ್ಲ ಮಗನ ಸಾಧನೆಗೆ ತುಂಬ ಸಂತೋಷಿಸಿದ್ದರು.

ಎಸ್ ಎಸ್ ಸಿ ಬಾಳೇಶರ ಜೀವನದಲ್ಲಿ ಒಂದು ಮುಖ್ಯ ಘಟ್ಟ. ಬಾಲಕ ಭಾಳೇಶ- ಇಂದು ಪ್ರವರ್ಧಮಾನಕ್ಕೆ ಬರುತ್ತಿರುವ ಯುವಕ! ಅದು ಮತ್ತೊಂದು ಪರ್ವಕಾಲ!! ಬುದ್ಧಿವಂತಕೆಯನ್ನು ಅರಿತಿದ್ದ ಅವರ ತಂದೆಯವರು ಸುಪುತ್ರನ ಮಹತ್ವಾಕಾಂಕ್ಷೆಗೆ ಅಡ್ಡ ಬರದೆ ತಮಗೆ ಎಷ್ಟೇ ಕಷ್ಟ-ತೊಂದರೆಯಾದರೂ ಸರಿ, ಮಗನನ್ನು ಕಾಲೇಜು ಓದಿಸುವ ಸಂಕಲ್ಪ ಮಾಡಿದರು.

೧೯೫೪ ರಲ್ಲಿ ಬಾಳೇಶರು ಎಸ್ ಎಸ್ ಸಿ ಪಾಸಾಗಿ ಉಚ್ಚ ಶಿಕ್ಷಣಕ್ಕಾಗಿ ಪರಸ್ಥಳಕ್ಕೆ ಹೋಗುವುದು ಅನಿವಾರ್ಯಗಿತ್ತು. ಅವರ ಅಂದಿನ ಕೌಟುಂಬಿಕ ಸ್ಥಿತಿಗಳಲ್ಲಿ ಸ್ವಂತ ಖರ್ಚಿನಲ್ಲಿ ಶಿಕ್ಷಣ ಮುಂದುವರಿಸುವದು ಅಷ್ಟು ಸುಲಭವಿರಲಿಲ್ಲ. ಉಭಯ ಸಂಕಟ, ಆದರೆ ಬಾಳೇಶರಿಗೆ ಮುಂದೆ ಕಲಿಯವೇಕೆಂಬ ಉತ್ಕಟ ಬಯಕೆ.

ಆಗ ಬಾಳೇಶರ ಬಾಳಿಗೆ ವರಪ್ರಸಾದವಾಗಿ ಮೂಡಿಬಂದದ್ದು ಬೆಳಗಾವಿಯ ಡಾ। ಶಿವಬಸವ ಮಹಾಸ್ವಾಮಿಗಳು, (ನಾಗನೂರು ಶ್ರೀಗಳು) ಪ್ರಸಾದ ನಿಲಯ, ಬೆಳಗಾವಿ ಕಾಲೇಜಿನಲ್ಲಿ ಪ್ರವೇಶ ಪಡೆಯಲು ಇದೇ ಮೂಲ ಆಧಾರವಾಯಿತು. ಲಿಂಗರಾಜ ಕಾಲೇಜಿನಲ್ಲಿ ಬಾಳೇಶರು ಮೊದಲ ವರ್ಷ (ಎಫ್.ವಾಯ್.) ಗೆ ಹೆಸರು ನೋಂದಾಯಿಸಿದರು.

ಅದೇ ವರ್ಷ ಬುದ್ದಣ್ಣ ಹಿಂಗಮೀರಿ ಆ ಕಾಲೇಜಿನಲ್ಲಿ ಹೆಸರು ನೋಂದಾಯಿಸಿದ್ದರು. ಬುದ್ದಣ್ಣ ಬಾಳೇಶರು ಬಹುಬೇಗ ಆತ್ಮೀಯ ಸ್ನೇಹಿತ-ಸಂಗಾತಿಗಳಾದರು. ಊಟ, ವಸತಿ, ಪಾಠ, ಓಡಾಟ-ಓದು ಎಲ್ಲ ಚಟುವಟಿಕೆಗಳು ಆಗ ಒಟ್ಟಿಗೆ.

---

೫. ಪಾ.ಲ.(ಬ.ಬ) ಮಹಾಲಿಂಗ ಮಂಗಿ ಪು.೯
೬. -ಅದೇ- ಪು.೧೦

ಯುವ ಬಾಳೇಶರಲ್ಲಿ ಆಗ ಅಪಾರ ಪ್ರಭಾವ ಬೀರಿದ ಕೃತಿ ಜಡಭರತರ 'ಮೂಕಬಲಿ' ನಾಟಕ. ಅದನ್ನು ಮತ್ತೆ ಮತ್ತೆ ಓದಿದ ಅವರು ಮುಂದೆ ೧೯೫೭ರ ಸುಮಾರಿಗೆ ಮುದ್ದಾಮ ಧಾರವಾಡಕ್ಕೆ ಹೋಗಿ ಜಡಭರತರನ್ನು ಅವರ ತಪೋಭೂಮಿಯೆನಿಸಿದ ಮನೋಹರ ಗ್ರಂಥ ಭಂಡಾರದಲ್ಲಿ ಕಂಡು ತಮ್ಮ ನೆಚ್ಚಿನ ಲೇಖಕರನ್ನು ಕಣ್ತುಂಬ ನೋಡಿ ಮನತುಂಬ ಮಾತನಾಡಿಸಿಕೊಂಡು ಬಂದರು.

### ೨.೪ ಕುಟುಂಬ ಜೀವನ ಹಾಗೂ ತಾಯಿ ವಾತ್ಸಲ್ಯ

ಲಗ್ನ ಪೂರ್ವದಲ್ಲಿ ಬಾಳೇಶರ ಕುಟುಂಬವೆಂದರೆ ತಂದೆ, ತಾಯಿ ಇಬ್ಬರು ಪ್ರೀತಿಯ ಸಹೋದರಿಯರು. ಈ ಸಹೋದರಿಯರಿಬ್ಬರೂ ಲಗ್ನವಾಗಿ ಪತಿಗೃಹವನ್ನು ತುಂಬಿದ್ದಾರೆ. ಮಕ್ಕಳು ಮೊಮ್ಮಕ್ಕಳೊಂದಿಗೆ ಸೌಖ್ಯವಾಗಿದ್ದಾರೆ.

೧೯೫೯ರ ಮೇ ತಿಂಗಳಲ್ಲಿ ಬಾಳೇಶ ಲಕ್ಷೆಟ್ಟಿಯವರಿಗೆ ಶ್ರೀ ವೀರಭದ್ರಪ್ಪಾ ಗೋಲಶೆಟ್ಟಿಯವರ ಮಗಳು ಸೌ. ಶಾರದಾದೇವಿಯವರೊಡನೆ ವಿವಾಹವಾಯಿತು. ವಿಜಾಪೂರ ಜಿಲ್ಲೆಯ

ಮುಧೋಳ ತಾಲೂಕಿನ ಹಲಗಲಿ ಗ್ರಾಮದ ಕೃಷಿಕ ಕುಟುಂಬದಿಂದ ಬಂದ ಶಾರದಕ್ಕ ಬಾಳೇಶರ ಬಾಳನ್ನು ಮನೆಯನ್ನು ತುಂಬಿದರು.

೧೯೬೧ರಲ್ಲಿ ಬಾಳೇಶ-ಶಾರದಾದೇವಿಯವರಿಗೆ ಚೊಚ್ಚಿಲು ಮಗುವಾಗಿ ಚಿ. ಆಶಾ ಜನಿಸಿ ಬಂದಳು. ಆಶಾ 'ಆಶಾಜ್ಯೋತಿ' ಯಾಗಿ ಬಾಳೇಶರಿಗೆ ಸಾಹಿತ್ಯದ ಸ್ಫೂರ್ತಿಯಾದಳು.

ವಯಸ್ಸಿನಿಂದ ಹಣ್ಣಾದ ಸೋತು ನಿಸ್ಸಾಯಕ ತಾಯಿ ಮಗ ಬಾಳೇಶರ ಬರುವನ್ನೇ ನೆಚ್ಚಿಕೊಂಡು ಜಾತಕಪಕ್ಷಿಯಂತೆ ಕಾಯಬೇಕು. ಬೆಳಗಾವಿಯಲ್ಲಿ ರೂಮ ಬಾಡಿಗೆ ಮಾಡಿಕೊಂಡು ಖಾನಾವಳಿ ಊಟ ಉಣ್ಣುತ್ತ, ಪುಸ್ತಕ ಬರೆಯುವ ಗೀಳಿನಲ್ಲಿ ಸರಿಯಾಗಿ ಊಟ ನಿದ್ರೆ ಮಾಡಲಾಗದ ಮಗ ಬಾಳೇಶರ ಕುರಿತೇ ಸದಾ ಆ ತಾಯಿಗೆ ಆತಂಕ ಕಳವಳಗಳು.

### ೨.೫ ಸಾಹಿತ್ಯ ಹವ್ಯಾಸ

ಸಾಹಿತ್ಯ ಯಾತ್ರೆ ಬಾಳೇಶರಿಗೊಂದು ಹವ್ಯಾಸವಾಗಿತ್ತು. ಅವರು ಪ್ರೋ.ಕೆ.ಜಿ.ಕುಂದಣಗಾರ, ಡಾ। ಆನೆಲುಪಧ್ಯೆ, ಡಾ। ಸಿಂಪಿ ಲಿಂಗಣ್ಣ, ಶ್ರೀ ಮಿರ್ಜಿ ಅಣ್ಣಾರಾಯ, ಶ್ರೀ ರಾವಬಹಾದ್ದೂರ, ಶ್ರೀ ಸತ್ಯಕಾಮ, ಶ್ರೀ ಅ.ನ.ಕೃ. ಶ್ರೀ ತ.ರಾ.ಸು, ಶ್ರೀ ಡಿ.ವಿ.ಜಿ. ಡಾ। ಕುವೆಂಪು, ಡಾ। ಮಾಸ್ತಿ, ಡಾ। ವಿ.ಕೃ.ಗೋಕಾಕ, ಡಾ। ದೇ.ಜ.ಗೌ, ಡಾ।

ಹಾ.ಮಾ.ನಾ, ಡಾ। ಹಂಪನಾ ಹೀಗೆ ಅನೇಕ ಸಾಹಿತ್ಯ ದಿಗ್ಗಜರನ್ನು ಹುಡುಕಿಕೊಂಡು ಹೋಗಿ ಭೆಟ್ಟಿಯಾಗಿ ಸಾಹಿತ್ಯಕವಾಗಿ ಸಮಾಲೋಚಿಸಿ ಆಶೀರ್ವಾದ ಪಡೆದು ಬಂದಿದ್ದಾರೆ. ಹಿರಿಯ ಸಮಕಾಲಿನ ಸಾಹಿತಿಗಳಲ್ಲಿ ಅವರಿಗೆ ಅಷ್ಟೊಂದು ಅಭಿಮಾನ; ಗೌರವ.

ಬಾಳೇಶರಿಗೆ ಕಾಲೇಜಿನ ಆರಂಭದ ವರ್ಷಗಳಲ್ಲೇ ಸಾಹಿತ್ಯದ ಒಲವು ಬೆಳೆದು ಬಲಿತು ನಿಂತಿತ್ತು. ಸಾಹಿತ್ಯದ ಓದು ರಚನೆಯೊಂದಿಗೆ ಸಾಹಿತ್ಯಿಕ ಸಂವಾದ, ಸಾಹಿತ್ಯಿಕ ಸಂಘಟನೆ, ಸಾಹಿತ್ಯಿಕಗೋಷ್ಠಿ ಚಟುವಟಿಕೆಗಳಲ್ಲಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡಿದ್ದರು.

೧೯೫೬ ನವ್ಹೆಂಬರ ೧ ರಂದು ಉದಯ ೧ ಪ್ರಕಟಿಸಿದರೆ, ಐದನೆಯ ಹುಟ್ಟುಹಬ್ಬದ ಸವಿನೆನಪಿಗಾಗಿ ೧೯೫೮ ಜನೆವರಿಯಲ್ಲಿ ಉದಯ ೨ ಓದುಗರ ಕೈಗಿತ್ತರು. ಬಹುಶ: ನಾಡಿನಲ್ಲಿ ಇದೊಂದು ಪ್ರಥಮ ಪ್ರಯತ್ನ ಇದ್ದಿತ್ತು.

೧೯೫೭ರಲ್ಲಿ ಹಿಂಗಮೀರಿಯವರ ಹೆಜ್ಜೆಯ ಮೇಲೆ ಹೆಜ್ಜೆ ಇರಿಸಿ 'ಭಾಗ್ಯೋದಯ' ಎಂಬ ತಮ್ಮ ಪ್ರಥಮ ಕವಿತಾ ಸಂಕಲನವನ್ನು ಪ್ರಕಟಿಸಿದರು. ಬಾಳೇಶರು ತಾವು ವಿದ್ಯಾರ್ಥಿಯಿದ್ದಾಗಲೇ, ಎರಡು ಸಂಪಾದಿತ ಕೃತಿ, ಒಂದು ಸ್ವರಚಿತ ಕವನಸಂಕಲನ ಪ್ರಕಟಿಸಿದ್ದು ಆ ಕಾಲದಲ್ಲಿ ಒಂದು ಅಪೂರ್ವ ಸಾಧನೆ ಎನಿಸಿಕೊಳ್ಳುತ್ತದೆ.

### ೨.೬ ಕಾವ್ಯ ಶೈಲಿ

ಆಧುನಿಕ ಮನೋರಂಜಿತ ಬದುಕಿನಲ್ಲೂ ಲಕ್ಷೆಟ್ಟಿಯವರು, ಕಾವ್ಯದ ಬೇರೆ ಬೇರೆ ಪ್ರಕಾರಗಳನ್ನು ದುಡಿಸಿಕೊಂಡಿದ್ದಾರೆ. ಭಾವಗೀತೆಗಳು, ದೇಶಭಕ್ತಿಗೀತೆಗಳು, ಪ್ರೇಮಕವನಗಳು, ಕ್ರಾಂತಿ, ಬಂಡಾಯದ ಕವಿತೆಗಳು, ಇಂದಿನ ರಾಜಕೀಯ ವಿಡಂಬನಾತ್ಮಕ ಕವನಗಳು ಕಳೆದುಕೊಂಡವರ ಬಗೆಗಿನ ಸ್ಮರಣಿಕಾ ಕಂದಪದ್ಯಗಳು, ಸಾಧು-ಸಂತರು ಪೂಜ್ಯರನ್ನು ಕಂಡಾದ, ಅವರಲ್ಲಿ ಭಕ್ತಿಯನ್ನು ಅರ್ಪಿಸಿ ರಚಿಸಿದ ಭಕ್ತಿಗೀತೆಗಳು, ಪ್ರಾದೇಶಿಕ, ಆಡು ಮಾತಿನ ಕವನಗಳು, ಆತ್ಮೀಯ ಒಡನಾಟದಿಂದ ಬಾವತರಂಗಗಳನ್ನು ಎಬ್ಬಿಸಿ, ರಚಿಸಿದ ಮೂರ್ತಿ ಕವನಗಳು. ಒಂದೇ, ಎರಡೇ, ಹಲವು ರೀತಿಯ ಕವನ ಸಾಲುಗಳು ಅವರ ಕಾವ್ಯ ಖಜಾನೆಯಲ್ಲಿ ಸಂಗ್ರಹವಾಗಿದೆ. ಅಲ್ಲದೆ ಶಿಶು

---

೭ ಡಾ.ಲ.(ಬ.ಬ.) ಮಹಾಲಿಂಗ ಮಂಗಿ ಪು.೨೯ ಅದೇ-೧೩
೮. ಕವ್ಯ ಚಿಂತನ ಶ್ರೀಕಾಂತ ದಾನವಾಡ ಪು. ೪

ಪದ್ಯಗಳು, ವಿಡಂಬನಾತ್ಮಕ ಚುಟುಕುಗಳು, ಅದರೊಂದಿಗೆ ದೇಶಿಯ (ಗ್ರಾಮ್ಯ) ಜಾನಪದ ಶೈಲಿಯ ಗೀತೆಗಳು, ಜಾನಪದ ಸೊಗಡನ್ನು ಹೊತ್ತು ಒತ್ತರಿಸಿ ಮೇಲೆ ಬಂದು ಕಾವ್ಯ ಶಾಸ್ತ್ರಕ್ಕೆ ರಸದ ಮಹಾಪೂರವನ್ನೇ ಹರಿಸಿವೆ. ಎಂದರೆ ಲಕ್ಷೆಟ್ಟಿಯವರ ಹೆಗ್ಗಳಿಕೆಗೆ ಸಮವಾಗುವುದಿಲ್ಲ. ಇಂದಿನ ಜನಮಾನಸದಲ್ಲಿ ಕಾವ್ಯ/ಕವಿತೆಯ ಹುರುಳು ಹುರುಳಿಲ್ಲದಂತಾಗಿದೆ. ಇಂತಹ ಸಂದರ್ಭದಲ್ಲೇ ಕಾವ್ಯದ ಚುಕ್ಕಾಣಿ ಹಿಡಿದ ನಾವಿಕ ಬಾಳೇಶರು.

ಕವಿಯ ಕವಿತೆಗೇನು ಬೆಲೆ ಇದೆ
ಈ ಲೋಕದಲ್ಲಿ
ಒಂದು ಚಲೋ ಕವಿತೆಗೆ
ಒಂದು ಕಪ್ಪು ಚಹಾ ಕೂಡಾ
ದಕ್ಕುವುದಿಲ್ಲ ಇಲ್ಲಿ

ಇಂತಹ ಪರಿಸ್ಥಿತಿಯಲ್ಲಿಯೇ ಹುಟ್ಟಬೇಕು ಕಾವ್ಯ. ಕಟ್ಟಬೇಕು ಒಂದು ಕವನ ಇಂತಹ ಸಂದಿಗ್ಧ ವಾತಾವರಣದಲ್ಲಿಯೇ ಆಗಬೇಕು ಒಬ್ಬ ಕವಿ, ಬರೆಯಬೇಕು ನೂರಾರು ಕವಿತೆಗಳ ಕಾವ್ಯ ಸಂಕಲನ ಎಂದು ಹೇಳುವ ಲಕ್ಷೆಟ್ಟಿಯವರು ೧೯೫೭ ರಿಂದ ಇಂದಿನವರೆಗೂ ಕಾವ್ಯದ ಕುಲುಮೆಯನ್ನು ಉಪಯೋಗಿಸಿಕೊಂಡಿರುವ ಸಮಯ ಪ್ರಜ್ಞಾವಂತರು ಬಾಳೇಶ.

೨.೭ <u>ಸಾಹಿತ್ಯ ರೂಪಗಳು</u>

ಲಕ್ಷೆಟ್ಟಿಯವರು ಕೇವಲ ಕಾವ್ಯ ಪ್ರಕಾರದಲ್ಲಿ ಮಾತ್ರ ಕೈಯಾಡಿಸದೆ ಕಥೆ, ಕಾದಂಬರಿ, ಜೀವನ ಚರಿತ್ರೆ, ವ್ಯಕ್ತಿ ಚಿತ್ರಗಳು, ಪತ್ರ ಸಾಹಿತ್ಯ, ಅಂಕಣ ಸಾಹಿತ್ಯ, ಶಿಸುಸಾಹಿತ್ಯ, ಹೀಗೆ ಸಾಹಿತ್ಯದ ವಿವಿಧ ಆಯಾಮಗಳಲ್ಲಿ ಬಾಳೇಶ ಲಕ್ಷೆಟ್ಟಿಯವರು ಕೃತಿಗಳನ್ನು ರಚಿಸಿ ಓದುಗ ಸಹೃದಯರ ಮೆಚ್ಚಿಗೆಗೆ ಪಾತ್ರರಾಗಿದ್ದಾರೆ. ಹುಬ್ಬಳ್ಳಿ ಮೂರು ಸಾವಿರಮಠದ ಪ್ರಕಟನೆ ವೀರಶೈವ ಭಾರತಿ ಮಾಲಿಕೆಯಲ್ಲಿ ಮೂವತ್ಮೂರು ಮೌಲಿಕ ಕೃತಿಗಳನ್ನು ಸಂಪಾದಿಸುವಲ್ಲಿ ತಮ್ಮ ವಿದ್ವತ್ತಿನ ಶ್ರಮವನ್ನು ಸಲ್ಲಿಸಿದ್ದಾರೆ. ಶ್ರೇಷ್ಠ ಸಾಹಿತಿಯಾಗಿ ಗಣನೀಯ ಸೇವೆ ಸಲ್ಲಿಸಿ ಕನ್ನಡ ವಾಙ್ಮಯ ಲೋಕವನ್ನು

---

೯. ಕಾವ್ಯ ಚಿಂತನ ಶ್ರೀಕಾಂತ ಶಾನವಾಡ ಪು.೧
೧೦. ಬಾ.ಲ.(ಬ.ಬ.) ಮಹಾಲಿಂಗ ಮಂಗಿ ಪು.೨೮

ಶ್ರೀಮಂತಗೊಳಿಸಿದ ಶ್ರೇಯಸ್ಸು ಇವರದು. "ಶ್ರೀ ಬಾಳೇಶ ಲಕ್ಷೆಟ್ಟಿ ಅವರು ಏನನ್ನೇ ಬರೆದರೂ ಓದಿಸಿಕೊಂಡು ಹೋಗುವಂತೆ ಬರೆಯುತ್ತಾರೆ"- ಡಾ.ಪಾಪು. ಅವರು ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯದ ವಿಷಯ ವಸ್ತುವನ್ನು ಕುರಿತು ಹೇಳಿರುವದು ಅವರ ಸಾಮರ್ಥ್ಯಕ್ಕೆ ನಿಲುಕದ ಮಾಣಿಕ್ಯ.

## ೨.೮ ಸ್ಫೂರ್ತಿ

ಶ್ರೀ ಬಾಳೇಶ ಲಕ್ಷೆಟ್ಟಿಯವರ ಸಾಹಿತ್ಯ ಬದುಕು ಹಲವು ಶ್ರೇಷ್ಠ ಸಾಹಿತಿಗಳ ಪ್ರಭಾವಕ್ಕೆ ಈಡಾಗಿದ್ದು ಸ್ಪಷ್ಟ. ಅವರುಗಳಲ್ಲಿ ಕೃಷ್ಣಮೂರ್ತಿ ಪುರಾಣಿಕ, ಬಸವರಾಜ ಕಟ್ಟಿಮನಿ, ವಿ.ಕೃ.ಗೋಕಾಕ, ಆನಂದ ಕಂದ, ಬೇಂದ್ರೆ, ಕುವೆಂಪುರಂತಹ ಕನ್ನಡ ದಿಗ್ಗಜರಿಂದ ಸ್ಫೂರ್ತಿಹೊಂದಿ ಅವರುಗಳ ಸಾಲಿನಲ್ಲಿ ನಿಲ್ಲತಕ್ಕಂತ ವಿದ್ವಾನ್ ವಾಙ್ಮಯಿ ಬಾಳೇಶರು. "ಸಾಹಿತ್ಯದ ಮೂಲಕ ಸಾಮಾಜಿಕ ಕ್ರಾಂತಿಯ ಹಂಬಲವನ್ನು ಮೈಮನದಲ್ಲಿ ತುಂಬಿಕೊಂಡ ಹಿರಿಯ ಜೀವಿಗಳ ಒಡನಾಳದಿಂದ ಲಕ್ಷೆಟ್ಟಿಯವರು ಪ್ರಭಾವಿತರಾಗಿ, ಅದೇ ಕನಸುಗಳನ್ನು ತಮ್ಮ ಕಣ್ಣಲ್ಲಿಯು ತುಂಬಿಕೊಂಡು ಬರೆಯುತ್ತಿರುವ ವ್ಯಕ್ತಿ"- ಡಾ.ಮಲ್ಲಿಕಾ ಘಂಟಿ ಅವರು ಹೇಳಿರುವ ಮಾತು ಸತ್ಯ.

## ೨.೯ ಆಸಕ್ತಿ-ಅಭಿರುಚಿ

ಬಾಳೇಶ ಲಕ್ಷೆಟ್ಟಿಯವರು ಹುರುಪಿನ ಕವಿ-ಸಾಹಿತಿ ವಿಮರ್ಶಕ-ಕತೆಗಾರರು. 'ಉದಯ' ಎಂಬ ಪತ್ರಿಕೆಯನ್ನೂ ಕೆಲಕಾಲ ಪ್ರಕಟಿಸಿದ್ದಾರೆ. ಶ್ರೀಯುತರು ವೃತ್ತಿಯಲ್ಲಿ ಅಧ್ಯಾಪಕರು. (ನಗರ ಸಭೆಯ ಜ್ಯುನಿಯರ್ ಕಾಲೇಜ, ಬೆಳಗಾವಿ) ಆರ್ಥಿಕವಾಗಿ ಅಧಿಕ ಲಾಭಗಳಿಸಬಹುದಾದ ಹಿರಿಯ ವೃತ್ತಿಯಾದ ವ್ಯಾಪಾರವನ್ನು ಬಿಟ್ಟು ಅಧ್ಯಾಪಕ ವೃತ್ತಿಯನ್ನು ಲೇಖನೋದ್ಯೋಗವನ್ನು ಆರಿಸಿಕೊಂಡ ಅವರ ಅಭಿರುಚಿ ಪ್ರಶಂಸನೀಯ. ಎಸ್.ಡಿ ಇಂಚಲ ಅವರು ಬೆಳಗಾವಿ ಜಿಲ್ಲಯ ಖ್ಯಾತ ಕವಿ, ಶಿಕ್ಷಣ ತಜ್ಞ, ಸ್ನೇಹಜೀವಿ. ಅವರ ಅಕಾಲ ಮರಣ ಜಿಲ್ಲೆಯ ಜನರನ್ನೆಲ್ಲ ದು:ಖಕ್ಕೀಡು ಮಾಡಿತು. ಇಂಚಲರ ಬಗೆಗೂ ಅವರ ಕೃತಿಗಳ ಬಗೆಗೂ ಯಾರಾದರೂ ಬರೆಯಲೇಬೇಕಿದ್ದಿತು. ಬಾಳೇಶ ಆ ಅಗತ್ಯದ ಕಾರ್ಯ ಮಾಡಿದರು.

---

೧೧. ವೀಣೆ (ಬಾ.ಲ.ಅ.)ಸಂ.ಪ್ರೋ.ಎಚ್.ಆಯ್.ತಿಮ್ಮಾಪೂರ ಪು.೧೩
೧೨. ಬಾ.ಲ.(ಬ.ಬ.) ಮಹಾಲಿಂಗ ಮಂಗಿ ಪು.೩೨

## ೨.೧೦ ಆದರ್ಶ ವ್ಯಕ್ತಿ ಬಾಳೇಶ

ಬಾಳೇಶ ಲಕ್ಷೆಟ್ಟಿಯವರ ಜೀವನ ಆದರ್ಶಮಯವಾದದು. ಒಬ್ಬ ವ್ಯಕ್ತಿ ತನ್ನ ಕರ್ತವ್ಯದಲ್ಲಿ ಆ ವ್ಯಕ್ತಿ ತನ್ನ ಕರ್ತವ್ಯವನ್ನು ಪ್ರೀತಿಸದೇ ನಿರಾಕರಿಸುತ್ತಾನೆ. ಲಕ್ಷೆಟ್ಟಿಯವರು ತಮ್ಮ ವೃತಿ ಜೀವನವನ್ನು ಆನಂದಿಸಿ ಸಂತೋಷಪಟ್ಟವರು. ಸಾಹಿತ್ಯ ಅವರ ಎರಡನೆಯ ಆಯ್ಕೆ.

ಸೃಜನಶೀಲ ಬರವಣಿಗೆಯಲ್ಲಿ ಅವರ ಲೇಖಣಿ ಪಳಗಿದೆ. ಒಳ್ಳೆಯ ಲೇಖಕರೆಂದು ಕೀರ್ತಿಶಾಲಿಗಳಾಗಿದ್ದಾರೆ. ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳು ಅವರಿಗೆ ಸ್ಪೂರ್ತಿ ತುಂಬುತ್ತಿರುವುದು ಶ್ಲಾಘ್ಯವಾಗಿದ್ದು, ಅವರ ಶೈಕ್ಷಣಿಕ ಅರ್ಹತೆಗೆ ಚೇತನ ತುಂಬುತ್ತಿವೆ. ಹೀಗೆ ಪರಸ್ಪರ ಪೂರಕ-ಪ್ರೇರಕ-ಪೋಷಕ ಚಟುವಟಿಕೆಗಳಿಂದ ಬಾಳೇಶ ಲಕ್ಷೆಟ್ಟಿಯವರ ಬದುಕು ಬರಹ ಜನರ ತನುಮಾನಸದಲ್ಲಿ ಭದ್ರಗೊಂಡು, ಯುವ ಜನತೆಯ ಹೃದಯದ ವೀಣೆಯನ್ನು ಮೀಟುತ್ತಿದೆ.

## ೨.೧೧ ಸಾಹಿತಿಗಳು ಕಂಡಂತೆ ಬಾಳೇಶ

೧. ಪತ್ರಿಕಾ ಅಂಕಣಕಾರರಾಗಿ, ಬರಹಗಾರರಾಗಿ, ಶ್ರೀ ಲಕ್ಷೆಟ್ಟಿಯವರು ಮಾಡಿರುವ ಸಾಧನೆಗಳನ್ನು ಗುರ್ತಿಸಿ ಅಭಿನಂದನಾ ಗ್ರಂಥ ಹೊರತರಲು ನಿರ್ಧರಿಸುವುದು ಎಲೆ ಮರೆಯ ಕಾಯಂತೆ ಇರುವ ಸಾಹಿತಿಯೊಬ್ಬರಿಗೆ ನೀಡಿದ ಗೌರವಾದರಗಳೆಂದು ನಾನು ಭಾವಿಸಿದ್ದೇನೆ- ಶ್ರೀ ಎಂ.ವೀರಪ್ಪ ಮೊಯಿಲಿ.

೨. ಶ್ರೀ ಬಾಳೇಶ ಲಕ್ಷೆಟ್ಟಿಯವರನ್ನು ನಾನು ಬಹಳ ದಿನಗಳಿಂದಲೂ ಬಲ್ಲೆ. ಸಾಹಿತ್ಯ ಚಟುವಟಿಕೆಗಳಲ್ಲಿ ಅವರ ಉತ್ಸಾಹ ಅದಮ್ಯವಾದುದು. ಅವರ ಬರಹದ ಶೈಲಿ ಆತ್ಮೀಯವಾದುದು- ಶ್ರೀ ಗೊ.ರು. ಚನ್ನಬಸಪ್ಪ.

೩. ಶ್ರೀ ಬಾಳೇಶ ಲಕ್ಷೆಟ್ಟಿಯವರು ಕನ್ನಡ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಕೃಷಿ ಮಾಡಿದವರು. ಅವರ ಸಾಹಿತ್ಯವನ್ನು ನಾನು ಬಹು ದಿನಗಳಿಂದಲೂ ಗಮನಿಸುತ್ತ ಬಂದಿದ್ದೇನೆ. ಸಾಹಿತ್ಯದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಂಥ ಅವರಿಗೆ ವೀಣೆ ಅಭಿನಂದನಾ ಗ್ರಂಥವನ್ನು ಅರ್ಪಿಸುತ್ತಿರುವುದು ಸಂತೋಷದ ಸಂಗತಿಯಾಗಿದೆ. ಒಬ್ಬ ಸಾಹಿತಿಗೆ ಇದಕ್ಕಿಂತ ದೊಡ್ಡ ಸನ್ಮಾನ ಯಾವುದಿದೆ?-ಡಾ. ಚಂದ್ರಶೇಖರ ಕಂಬಾರ (ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು)

೪. ಐವತ್ತು ವರ್ಷಗಳ ಸಾರ್ಥಕ ಜೀವನದಲ್ಲಿ ಬಾಳೇಶ ಅವರು ಅರ್ಥಪೂರ್ಣವಾದ ಸಾಹಿತ್ಯ ನಿರ್ಮಿಸಿದ್ದಾರೆ.- ಡಾ.ಆರ್.ಸಿ.ಹಿರೇಮಠ

೫. ಜಗನ್ನಾಥರಾವ ಜೋಶಿ ಅವರೊಬ್ಬ ಅತಿ ವಿರಳದ ಪರಿಶುದ್ಧ ರಾಜಕಾರಣಿ. ಈ ವ್ಯಕ್ತಿ ಚಿತ್ರ ಬರೆದ ಅಗತ್ಯವಾಗಿದ್ದ ಒಂದು ಒಳ್ಳೆಯ ಕೆಲಸ ಮಾಡಿದ್ದೀರಿ.- ಡಾ. ಹಾ.ಮಾ. ನಾಯಕ

೬. ಸ್ವತಃ ಬಹುಮುಖ ಪ್ರತಿಭೆ ಬಹುಮುಖ ಪ್ರಜ್ಞೆಯ ನನ್ನ ಸಾಹಿತ್ಯ ಸೋದರ ಲಕ್ಷೆಟ್ಟಿ ಅವರು ಸಮರ್ಥ ಶಿಕ್ಷಕರಾಗಿ ಬಹು ಶಾಖಾ ಸಾಹಿತ್ಯ ಲೇಖಕರಾಗಿ ಇಂದಿನ ತರುಣ ಸೃಜನಶೀಲ ಕವಿ ಸಾಹಿತಿಗಳಿಗೆ ಒಂದು ಮಾದರಿಯಾಗಿದ್ದಾರೆ- ಶ್ರೀ ಎನ್ಕೆ.

೭. ಬಾಳೇಶ ಅವರ ಹೊಳೆಯುವ ಕಣ್ಣುಗಳ ಹಿಂದೆ ಸೋಲಿನ, ಅಸಹಾಯಕತೆಯ, ನೋವಿನ ಸಂಕಟದ ಒಂದು ಅತಲ ಸಾಗರವೇ ಅಡಗಿಕೊಂಡಂತಿದೆ. ಆದರೂ ಅವೆಲ್ಲವನ್ನೂ ಮೀರಿ ನಿಲ್ಲುವ ಸಾಹಸ ಅವರಲ್ಲಿದೆ- ಶ್ರೀ ಚಂದ್ರಕಾಂತ ಕುಸನೂರು.

೮. ಶ್ರೀ ಬಾಳೇಶ ಲಕ್ಷೆಟ್ಟಿ ಅವರ ಸಾಹಿತ್ಯಕ್ಕೆ ವಿಸ್ತಾರ ಒಂದು ಮುಖ. ವೈವಿಧ್ಯ ಇನ್ನೊಂದು ಮುಖ.- ನಾಡೋಜ ಡಾ. ಕಮಲಾ ಹಂಪನಾ

೨.೧೨ <u>ಲಕ್ಷೆಟ್ಟಿಯವರ ಬರವಣಿಗೆಯ 'ಷಷ್ಠಿ-ಪೂರ್ತಿ' ಸಂಭ್ರಮ</u>

ಶ್ರೀ ಬಾಳೇಶರ ಬರವಣಿಗೆಗೆ ಈಗ ಅರವತ್ತು ವರುಷ. ಆರವತ್ತು ವರುಷ ಪೂರ್ಣಗೊಂಡ ಇವರ ಬರವಣಿಗೆಯ ಸಂಭ್ರಮವನ್ನು ಸಂಘ ಸಂಸ್ಥೆಗಳು ಅಭಿನಂದಿಸಿ ಗೌರವಿಸಿವೆ. ೧೦-೨-೨೦೧೪ ರಂದು ಬೆಳಗಾವಿಯಲ್ಲಿ ಲಕ್ಷೆಟ್ಟಿಯವರ ಬರವಣಿಗೆಯ ಷಷ್ಠ್ಯಬ್ದಿ ಸಮಾರಂಭವನ್ನು ಹಿರಿಯ  ಕವಿಗಳೂ ನಿವೃತ್ತ ಜಿಲ್ಲಾ ನ್ಯಾಯಾದೀಶರಾದ ಜಿನದತ್ತ ದೇಸಾಯಿ ಅವರ ಅಧ್ಯಕ್ಷತೆಯಲ್ಲಿ, ಹಿರಿಯ ಸಂಶೋಧಕ ಸಾಹಿತಗಳಾದ ಡಾ. ಹಂಪನಾಗರಾಜಯವರು ಉದ್ಘಾಟಿಸಿದರು. ೦೮-೦೩-೨೦೧೪ ರಂದು ಗೋಕಾಕ ಸಾಹಿತ್ಯ ಬಳಗದಿಂದ ೨೦೧೦ನೇ ಸಾಹಿತ್ಯ ಚಿಂತನ ಕಮ್ಮಟದಲ್ಲಿ ಸಾರ್ವಜನಿಕವಾಗಿ ಅಭಿನಂದನಾ ಸಮಾರಂಭ ಜರುಗಿತು. ಇತ್ತೀಚಿಗೆ ೧೩-೭-೨೦೧೪ ರಂದು ಸಂಕೇಶ್ವರ ನಾಗರೀಕ ವೇದಿಕೆಯ ಆಶ್ರಯದ ವತಿಯಿಂದ ಬಾಳೇಶ ಷಷ್ಠ್ಯಬ್ದಿ ಬರವಣಿಗೆ ಅಭಿನಂದನಾ ಕಾರ್ಯಕ್ರಮ ಜರುಗಿತು.

ಅರವತ್ತು ವರುಷ ಬರೆದುಕೊಂಡು ಬಂದಿದ್ದೇನೆ ಜನ ಗುರುತಿಸಿದ್ದಾರೆ. ನನಗೆ ಇದೇ ದೊಡ್ಡ ಪ್ರಶಸ್ತಿ. "ಬದುಕು ತೋರಿದಂತೆ ಸ್ವೀಕರಿಸುವುದೇ ನನ್ನ ಭಾವ" ಎನ್ನುತ್ತಾರೆ ಲಕ್ಷೆಟ್ಟಿಯವರು.

---

೧೩. ವೀಣೆ (ಬಾ.ಲ.ಅ.) ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೧೩
೧೪. ಬಾ.ಲ. (ಬ.ಬ.) ಮಹಾಲಿಂಗ ಮಂಗಿ ಪು.೩೨

ನಮ್ಮ ನಾಡಿನ ಸಾಹಿತ್ಯ-ಸಂಸ್ಕೃತಿ ಜೀವಂತಿಕೆಯ ದ್ಯೋತಕವಾಗಿ ಪ್ರತಿನಿಧಿಯಾಗಿ ಮೂಡಿನಿಲ್ಲುವ ಬಾಳೇಶ ಲಕ್ಷೆಟ್ಟಿ ಅಂಥವರ ಕಾರ್ಯ ಸಾಧನೆಗಳನ್ನು ಸಂಸ್ಮರಿಸುವದು ಅಗತ್ಯವಿದೆ. ಅವರ ಮಾನವೀಯ ಅನುಕಂಪ, ಆದರ್ಶತೆ, ಜೀವನಶೈಲಿ, ಸನ್ನಡತೆಗಳನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವದರಿಂದ ನಮ್ಮ ಬಾಳನ್ನು ಬೆಳಗಿಸಿಕೊಳ್ಳಲು ಮತ್ತು ಜೀವನದಲ್ಲಿ ಮಹೋನ್ನತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ.

## ಅಧ್ಯಾಯ-ಮೂರು

## "ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯ"

"ಕಣ್ಣಿಗೆ ಕಾಣಿಸಿದನ್ನು ಆತ್ಮಕ್ಕೆ ಆನಂದ ನೀಡುವಂತೆ ವರ್ಣಿಸುವುದೇ ಕಾವ್ಯ". ಕಾವ್ಯ ಹುಟ್ಟುವುದು ಕವಿಯ ಅಂತರಂಗದ ಆಲಾಪದಲ್ಲಿ. ಕವಿಗೆ ಕವನ ರಚಿಸುವಾಗ ಯಾವುದೇ ನಿರ್ಬಂಧ ಸಲ್ಲದು. 'ಕವಿ ಕಾವ್ಯದ ಬ್ರಹ್ಮ'. ಅವನಿಗೆ ಇಂಥದೆ ವಿಷಯದ ಕವನ ಬರೆಯಲು ಒತ್ತಡ ಸಲ್ಲದು. ಆತ ತನ್ನ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವಲ್ಲಿ ಆತನಿಗೆ ಸಂಪೂರ್ಣ ಸ್ವತಂತ್ರ್ಯವಿದೆ. ಯಾರ ಹಂಗಿಗೂ ಒಳಗಾಗಬೇಕಾದ್ದಿಲ್ಲ. ಆತನ ಸ್ವಾತಂತ್ರ್ಯದ ಇತಿಮಿತಿಯಲ್ಲಿ ಆತ ಕವನ, ಕಥನ ರಚಿಸುತ್ತಾ ನಡೆಯುತ್ತಾನೆ. ಶ್ರೀ ಬಾಳೇಶ ಲಕ್ಷೆಟ್ಟಿಯವರ ಕವಿತೆಯ ಸಾಲುಗಳು ಯಾರ ಹಂಗಿಗೆ ಒಳಗಾಗದೆ ನೇರ–ದಿಟ್ಟ–ನಿರಂತರ ಭಾವನೆಗಳನ್ನು ಹೊರಹಾಕುವಂತವು. ಒಬ್ಬ ಕವಿಯ ಜವಾಬ್ದಾರಿಗಳೇನು? ಎಂಬುದನ್ನು ಬಾಳೇಶರು ಅರಿತುಕೊಂಡವರು. ಸಮಾಜದ ಏರು–ಪೇರುಗಳು ಅದರೊಳಗಿನ ಬದುಕಿನ ಒಳ ಸುಳಿಗಳ ತೀವ್ರತೆ, ಪ್ರೀತಿ, ಪ್ರೇಮ, ಪರಸ್ಪರ ತಿಳಿವಳಿಕೆ, ನಿಸರ್ಗದ ರಮ್ಯತೆ, ಜನನಿ ಜನ್ಮಭೂಮಿ, ವ್ಯಕ್ತಿ ಶ್ರೇಷ್ಠತೆಗಳನ್ನು ಬಾಳೇಶರು ಆಳಕ್ಕಿಳಿದು ರಚಿಸಿ, ಸ್ವಾದಿಷ್ಟ ಅಡುಗೆ ತಯಾರಿಸಿ, ಆ ತಿನಿಸನ್ನೂ ಯಾರು ಬೇಕಾದರೂ, ತಮ್ಮ ಇಷ್ಟ, ರುಚಿಗಳಂತೆ ಮೆಲ್ಲಬಹುದು, ಆಸ್ವಾದಿಸಬಹುದು.

ಕಾವ್ಯ ರಚನೆಯೆಂಬುದು Sleep walk ಅಲ್ಲ. ಅದು ಅಂತಃಪ್ರಜ್ಞೆಯನ್ನು ಜಾಗೃತಗೊಳಿಸಿ ರಚಿಸುವಾಗಿನ ಅಂತರಂಗದ ಕ್ರಿಯೆಯಾಗುತ್ತದೆ. ಇಲ್ಲಿ ಕವಿಯ ಜವಾಬ್ದಾರಿಯೇನು? ಎಂಬ ಪ್ರಶ್ನೆಗೆ ತನ್ನಿಂದ ತಾನೇ ಉತ್ತರ ಸಿಗುತ್ತದೆ. ಇಲ್ಲಿ ತನ್ನತನ ಎಂಬುದಕ್ಕಿಂತ ಪರರ ಅನಿಸಿಕೆಗಳು. ಆಲಾಪಗಳು ವಿವಿಧೋದ್ದೇಶಗಳ ಹಲವು ಮಜಲುಗಳು ಬಿಚ್ಚಿಕೊಳ್ಳತ್ತ ಸಾಗುತ್ತವೆ.

ರಾಷ್ಟ್ರಕವಿ ಕುವೆಂಪು ಕಾವ್ಯವನ್ನು ಕುರಿತು "ಭಾವನೆಗಳಿಲ್ಲದೇ ರಚನೆಗೊಳ್ಳುವ ಕವನಗಳು, ಬಂಡೆಯ ಮೇಲೆ ಹುಟ್ಟುವ ಬೇವಿನ ಮರದಂತೆ" ಎಂದಿದ್ದಾರೆ. ಕವನದ ಹುಟ್ಟು ಇಲ್ಲಿ ಭಾವಾಂತರಂಗವಾಗುತ್ತದೆ. ಭಾವನೆಗಳನ್ನು ಭಾಷಾಂತರ ಮಾಡಿದಾಗ ಹುಟ್ಟುವುದೇ ಕಾವ್ಯ. ಅದಕ್ಕೆ ಅನನ್ಯತೆ ಮೂಡಿ ಒಂದು ನಿರ್ದಿಷ್ಟ ಚೌಕಟ್ಟಿನೊಳಗೆ ಕುಳಿತುಕೊಂಡು ದೀರ್ಘವಾಗಿ ಹೇಳಬೇಕೆಂದದ್ದನ್ನು ಅರ್ಥವತ್ತಾಗಿ ಚುಟುಕಾಗಿ, ಹಲವು

ಅರ್ಥಗಳಲ್ಲಿ ಶಬ್ದ ಜೋಡಣೆಯಾದಾಗ ಕಾವ್ಯವೆನಿಸಿಕೊಳ್ಳತ್ತದೆ. ಮೇಲಿನ ಈ ಗುಣ ವಿಶೇಷಗಳು ಬಾಳೇಶ ಲಕ್ಷೆಟ್ಟಿಯವರ ಕಾವ್ಯದಲ್ಲಿ ಹುಲುಸಾಗಿ ಕಂಡು ಬರುತ್ತವೆ. ಅವರ ಕವನಗಳು ಭಾವ ತೀವ್ರತೆಯಿಂದ ಎಂಥಹ ಸಾಮಾನ್ಯನ ಹೃದಯವನ್ನು ತಟ್ಟಿ, ಮುಟ್ಟುವ ಸಾಮರ್ಥ್ಯ ಪಡೆದಿವೆ. ನವ್ಯ ಕಾವ್ಯದ ಶೈಲಿಯಲ್ಲಿ ಇಂದು ಹಾಗೆ ಹುಟ್ಟಿ ಹೀಗೆ ಸಾಯುವ ಇಂದಿನ ಕಾವ್ಯಗಳಿಗೆ ಹೋಲಿಸಲು ಸಾಧ್ಯವಿಲ್ಲ. ಅವುಗಳಿಗೆ ಒಂದಷ್ಟು ಶಾಸ್ತ್ರೀಯ ಬುನಾದಿಯನ್ನು ಹಾಕಿದ್ದು ಲಕ್ಷೆಟ್ಟಿಯವರು ಪೂರ್ಣ ಕವಿಯಾಗುವಲ್ಲಿನ ನಿದರ್ಶನವಿದು.

'ಕಾವ್ಯಕ್ರಿಯೆ' ಎಂಬುದು ತುಂಬಾ ವೈಯಕ್ತಿಕ (Personal) ಹಾಗೂ ಖಾಸಗಿ (Private) ಯಾದದ್ದು. ಇದಕ್ಕೆ ಬಾಳೇಶರ 'ಕಾವ್ಯ' ಒಟ್ಟು ಶಕ್ತಿಯಾಗಿ, ಉದಾಹರಣೆಯೆನಿಸಿದೆ. ಅವರ ಕಾವ್ಯದ ರಚನೆಯ ಪೂರ್ವದಲ್ಲಿ. ಯಾರಾದರೂ ಕಂಡುಕೊಳ್ಳುವ ಮಹತ್ವದ ಅಂಶವೆಂದರೆ ಅಧ್ಯಯನ, ಅಧ್ಯವಸನ, ಚಿಂತನ ಮತ್ತು ಮನನ. ಇವುಗಳು ನಿರಂತರವಾಗಿ ಸಾಗಿದಾಗ ಕಾವ್ಯ ಗಟ್ಟಿಗೊಳ್ಳುತ್ತದೆ. ಬದುಕಿನ ಅನೇಕ ಮಜಲುಗಳನ್ನು ಬಿಚ್ಚಿಟ್ಟು "ಇದೇ ಬದುಕು-ಜೀವನ" ಎಂಬುದನ್ನು ಸಾಕ್ಷೀಕರಿಸಿದೆ. ಇಂತಹ ಒಂದು ಅಂತ:ಶಕ್ತಿಯ ಗುಣವನ್ನು 'ಕಾವ್ಯಕ್ರಿಯೆ'ಯನ್ನಾಗಿಸಿದ್ದು ಲಕ್ಷೆಟ್ಟಿಯವರು 'ಕವಿ' ಎಂಬುದನ್ನು ಸಾರಿ ಸಾರಿ ಹೇಳುವಂತೆ ಮಾಡಿದೆ. ಆ ಕ್ರಿಯೆಯು ಸ್ಲೀಪ ವಾಕ್ ಆಗದೆ, ಎಚ್ಚರದ ಪ್ರಜ್ಞಾಪೂರ್ವಕವಾದ ಹೆಜ್ಜೆ ಹಾಗೂ ಗಂಭೀರ ನಡೆಯಾಗಿದೆ.

ಕನ್ನಡ ವಾಗ್ಮಿಗಳು ಪ್ರಗತಿಶೀಲರು, ನವ್ಯರು, ನವ್ಯೋತ್ತರರು, ಬಂಡಾಯದವರು, ದಲಿತ ಸಂವೇದನೆಯವರು, ಎಲ್ಲರು ಆಯಾ ಕ್ಷೇತ್ರಗಳಲ್ಲಿ ಕಾರ್ಯ ಎಸಗಿ, ತಮ್ಮ ಹೆಜ್ಜೆ ಗುರುತುಗಳನ್ನು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ, ಪ್ರಸ್ತುತ ಕಾವ್ಯ ರಂಗದಲ್ಲಿ ಬೀಸುವ ಗಾಳಿ ಯಾವ ರೀತಿಯದ್ದೆಂದು ಹೇಳುವುದು ಕಷ್ಟ. ಇಲ್ಲಿ ಒಬ್ಬೊಬ್ಬರು, ಒಂದೊಂದು "ಇಸಂ"ನೊಂದಿಗೆ ಗುರುತಿಸಿಕೊಳ್ಳುವ ಪ್ರಯತ್ನದಲ್ಲಿದ್ದಾರೆ. ಹಾಗೆ ಸ್ವಂತಿಕೆಯನ್ನು ತಯಾರಿಸಿಕೊಳ್ಳುವ ಅನಿವಾರ್ಯ ಕ್ರಿಯೆಯನ್ನು ಅರಿತಂತಿದೆ. 'ಇಸಂ'ಗಳಿಂದ ಹುಟ್ಟುವ ಏಕತಾನತೆಯಿಂದ ಬಿಡುಗಡೆ ಹೊಂದಬೇಕೆಂಬ ಉತ್ಕಟ ಆಸೆ. ನಮ್ಮ ಕವಿಗಳಲ್ಲಿ ಎದ್ದು ಕಾಣುವ ಅಂಶ. ಹಾಗೆಯೇ ಲಕ್ಷೆಟ್ಟಿಯವರ 'ಕಾವ್ಯ' ಯಾವುದೇ 'ಇಸಂ'ಗೆ ಒಳಗಾಗಿಲ್ಲದ್ದು ವಿಶೇಷ. ಸಂದರ್ಭ ಸ್ಥಿತಿಗತಿ ಪಕ್ಕಾ ಅರಿವಿನ ಮೂಸೆಯಲ್ಲಿ ಅವರ ವಿವಿಧ ಶೈಲಿಯ ಕವನಗಳು, ಅವರದೇ 'ಕಾವ್ಯ ಪದ್ಧತಿ'ಯನ್ನು ಹುಟ್ಟು ಹಾಕಿ ನವ್ಯ

---

೧೫.ಕಾವ್ಯ ಚಿಂತನ – ಶ್ರೀಕಾಂತ ಕಾನವಾಡ ಪು.೪ ಮತ್ತು ೫
೧೬. ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ – ಸಂ.ಡಾ.ಚಿ.ಸಿ.ಲಿಂಗಣ್ಣ ಪು.೨೦೦

ಹಾಗೂ ನವ್ಯೋತ್ತರ ಕಾಲ ಘಟ್ಟದ ಕವಿಯಾಗಿ ಕಾವ್ಯಗಳಿಗೆ ಒಳ್ಳೆಯ ವಸ್ತುಸ್ಥಿತಿಯ ಸುರಭಿಯನ್ನು ತೇಲಿ ಬಿಟ್ಟಿದ್ದಾರೆ.

ಲಕ್ಷೆಟ್ಟಿಯವರ ಕಾವ್ಯ ರಚನೆಯಲ್ಲಿ ಯಾವುದೇ ರೀತಿಯ ಪೂರ್ವಾಗ್ರಹ ಕಾಣುವುದಿಲ್ಲ. ಎದುರಿಗೆ ಬಂದವರನ್ನು ಬಂದದ್ದನ್ನು ಎಂಥದ್ದೇ ಇರಲಿ, ಅದನ್ನು ತನ್ನದೆಂದು ಬಾಚಿ ತಬ್ಬಿಕೊಳ್ಳುವ ಗುಣ ಅವರ ಪಕ್ಕಾ ಕವಿಯಾಗಿ, ಕಾವ್ಯಕ್ಷೇತ್ರಕ್ಕೆ ನೀಡಿದ ಕೊಡುಗೆಯೆನ್ನಿಸಿದೆ. ಕವಿಯಾದವ ಯಾವುದಾದರೂ, 'ಇಸಂ' ಅಥವಾ ಪೂರ್ವಾಗ್ರಹಕ್ಕೆ ಸಿಲುಕಿದರೆ, ಕಾವ್ಯವು ಸೋತು ಸೊರಗಿ ಹೋಗುತ್ತದೆ. ಇವರ ಕವನಗಳು, ಒಂದರ ನಂತರ ಮತ್ತೊಂದು, ತಾವೇ ಸ್ಪರ್ಧೆಗಿಳಿಯುವುದರಿಂದ, ಇಲ್ಲಿ ಯಾರ ಹೋಲಿಕೆಯೂ ಅವಶ್ಯವಿಲ್ಲವೆನ್ನಿಸುತ್ತೆ. ಅರ್ಥಾತ್ ಒಬ್ಬ ಕವಿ, ಬರಹಗಾರ, ಸಹೃದಯ ಸಾಹಿತಿ ಬಾಳೇಶ ಲಕ್ಷೆಟ್ಟಿಗೆ ಬಾಳೇಶ ಲಕ್ಷೆಟ್ಟಿಯೇ ಹೋಲಿಕೆ.

ಶ್ರೀ ಬಾಳೇಶ ಲಕ್ಷೆಟ್ಟಿಯವರು ಭಾವಜೀವಿ, ಮುಖ್ಯವಾಗಿ ಹೋರಾಟ ಕವಿ. ಅವರು ಸುಮ್ಮನೆ ಕೂಡ್ರುವ ಸ್ವಭಾವದವರಲ್ಲ. ಏನಾದರನ್ನು ಬರೆಯುತ್ತಿರುವುದು ಅವರ ಸ್ವಭಾವಕ್ಕೆ ಅಂಟಿಕೊಂಡ ಗುಣ. ತಮ್ಮಲ್ಲಿರುವ ಕಾವ್ಯ ಪ್ರತಿಭೆಯನ್ನು ಅವಿಶ್ರಾಂತವಾಗಿ ದುಡಿಸಿಕೊಳ್ಳುವ ಪ್ರಯತ್ನವಾದಿಯಾಗಿರುವುದರಿಂದ ಅವರನ್ನು ಹೋರಾಟ ಕವಿಯೆಂದು ಅವರ ಕವಿತೆಯ ಸಾಲುಗಳೇ ಹೇಳುತ್ತವೆ.

ಲಕ್ಷೆಟ್ಟಿಯವರ ಸಾಹಿತ್ಯದಲ್ಲಿ ನವೋದಯದ ಸೆಳಕು ಇದ್ದರೂ ಅವರು ನವೋದಯ ಕವಿಯಲ್ಲ. ನವ್ಯದ ಹೊಳಪು ಇದ್ದರೂ ಪೂರ್ಣ ನವ್ಯ ಕವಿಯಲ್ಲ, ಬಂಡಾಯ ಮನೋಧರ್ಮ ಕಂಡುಬಂದರೂ ಬಂಡಾಯ ಕವಿಯಲ್ಲ. ಶ್ರೀಸಾಮಾನ್ಯರ ಬದುಕಿನೊಳಹೊಕ್ಕು ಅವರ ವ್ಯಥೆ, ಕಥೆ ಮೊದಲಾದುದನ್ನೂ ಕಂಡುಕೊಂಡು ಕರಗುವ, ಕೊರಗುವ, ರೋಸುವ ಜೀವ ಲಕ್ಷೆಟ್ಟಿಯವರದು. ಅದಕ್ಕಾಗಿ ಅವರನ್ನು ಜನಪರ ಕವಿ ಎಂದು ಕರೆದರೆ ತಪ್ಪಲ್ಲ. ಅಸಹಾಯಕರ ಮೇಲೆ ಆಗುವ ಆಕ್ರಮಣ, ಅನ್ಯಾಯವನೆಂದಿಗೂ ಅವರು ಸಹಿಸಿಕೊಳ್ಳುವವರಲ್ಲ. 'ಯಕ್ಷಪ್ರಶ್ನೆ' 'ಗಾಳಿಪಟ' 'ತೋಳಬಂದಾವೂ ತೋಳ' ಈ ಕವನ ಸಂಕಲನಗಳನ್ನು ಅಧ್ಯಯನ ಮಾಡಿದರೆ ಈ ಮಾತು ಮನದಟ್ಟಾಗಬಹುದು.

ಗ್ರಾಮೀಣ ಬದುಕಿನ ಹಿನ್ನೆಲೆಯು ಅವರ ಬದುಕಿನ ಅನುಭವ. ಆ ಅನುಭವದ ಕಣಜದೊಳಗಿಂದ ಗೋಕಾಕ ನಾಡಿನ ಬದುಕು-ಜೀವನ, ನಡೆ-ನುಡಿಗಳು ಅವರ ಕಾವ್ಯದಾದ್ಯಂತ ಹಾಸುಹೊಕ್ಕಾಗಿ ಪೋಣಿಸಲ್ಪಟ್ಟಿದೆ. ಭಾಷೆಯ ಬಳಕೆಯಲ್ಲಿ ಯಾವುದೇ

ರೀತಿಯ ಸೋಗಲಾಡಿತನಗಳು, ಅವರ ಕವನಗಳನ್ನು ಓದಿ ಅನುಭವಿಸುವಾಗ ಅನುಭವಕ್ಕೆ ಬಾರದಿರುವುದು ಒಂದು ಪ್ಲಸ್ ಪಾಯಿಂಟ್.

೧೯೫೦ರಲ್ಲಿ ರಚನೆಯಾದ, 'ಭಾಗ್ಯೋದಯ' ಎಂಬ ಕವನ, ಸಮಯ, ಸಂದರ್ಭ, ಸ್ಥಿತಿಗಳನ್ನು ಚನ್ನಾಗಿ ಅಳವಡಿಸಿಕೊಂಡಿದ್ದ ಸಾಂದರ್ಬಿಕ ಕವನವಾಗಿ ಮೂಡಿಬಂದಿದೆ. "ಕಲ್ಪನೆಯ ಕೂಸಾದ ಕಲೆ ಪಲಾಯನ ವಿಧಾನ" – ಎಂಬ ತಾರ್ಕಿಕರ ಆರೋಪದಿಂದ ಕಾವ್ಯ ಮುಕ್ತವಾಗುತ್ತಿದೆ, ಜನಸಮ್ಮುಖವಾಗಿ. ಸತ್ಯ ಸೌಂದರ್ಯಗಳ ಉಪಾಸಕನಾದ ಕವಿ ಇತ್ತೀಚೆ ರಾಷ್ಟ್ರೀಯ ಪ್ರವೃತ್ತಿಯುಳ್ಳವನಾಗುತ್ತಿದ್ದಾನೆ. ಅವನ ಸುರಸ್ವಪ್ನವನ್ನು ಅರಿತ ಜನತೆ ಉತ್ತಮವಾದುದಕ್ಕಾಗಿ ಶ್ರಮಿಸುತ್ತಿದೆ. ಇಂತಹ ಕವಿ ಪರಂಪರೆ ವಿಟ್ಮನ್, ಕಾರ್ಪೆಂಟರ್, ಮೈಕೊವೆಸ್ಕಿ ಮೊದಲಾದವರಿಂದ ಪುಷ್ಟವಾಗಿದೆ. ಶ್ರೀ ಬಾಳೇಶ ಲಕ್ಷೆಟ್ಟಿಯವರೂ ಆ ದಾರಿಯಲ್ಲಿ ಹೆಜ್ಜೆ ಹಾಕಿದ್ದು ಸೂಕ್ತ. ಈ ಪುಟ್ಟ ಸಂಗ್ರಹ ರಾಷ್ಟ್ರೀಯ ಸಾಹಿತ್ಯ ಸಿಂಧುವಿನಲ್ಲಿ ಒಂದು ಬಿಂದುವಾಗಿದೆ.

ಲಲಿತ ಪ್ರಸನ್ನ ಭಾವನೆಗಳು ಅಭಿವ್ಯಕ್ತವಾದ ಅವರ ಈ ಕವನಗಳಲ್ಲಿ, ಅಲ್ಲಲ್ಲಿ ಉತ್ಸಾಹದ ಕೆಲವು ಸ್ಖಾಲಿತ್ಯಗಳಿವೆ. ಆದರೂ ಕವನಗಳಲ್ಲಿ ಒಂದು ಬಗೆಯ ಶಕ್ತಿಯಿದೆ. ಇಲ್ಲಿನ ಐದು ಕವನಗಳು ವಾಚನಾರ್ಹವಾಗಿದೆ. ಅವರ ದೃಷ್ಟಿ ಪ್ರಗತಿಪರವಾದದು, ಭಾರತದ ಏಕತೆ, ಕರ್ನಾಟಕದ ಹಿರಿಮೆ ಅವರ ದೃಷ್ಟಿಯಲ್ಲಿ ವ್ಯಕ್ತವಾಗಿವೆ. ಭಾರತದ ಕೊಡುಗೆ ಪಂಚಶೀಲ ಎಂಬ ಪ್ರಜ್ಞೆ ಅವರಲ್ಲಿದೆ. ಸಂಸ್ಕೃತಿಯ ಭವ್ಯತೆ–ದಿವ್ಯತೆಗಳನ್ನು, ಕವಿ ಅದಕ್ಕಾಗಿ ಶ್ರಮಿಸಲು ಜನತೆಯನ್ನು ಕರೆಯುತ್ತಾರೆ. 'ಶತವರುಷಗಳ ಕನಸು' ಭಾರತದ ಪ್ರಥಮ ಕ್ರಾಂತಿವೀರರಿಗೆ ಕೊಟ್ಟ ತರ್ಪಣ. ನಾಡಿಗೆ ಬಂದ ಈ ಸ್ವಾತಂತ್ರ್ಯ ಅಂದಿನ ಕ್ರಾಂತಿಯೋಧರ ಪುಣ್ಯಬಲ ಎಂದು ಅರುಹುತ್ತಾರೆ. ಈ ಬಗೆಯ ಕೃತಜ್ಞತೆ, ವಿಶಾಲದೃಷ್ಟಿ, ಏಕತೆಯಗುರಿ, ವಿಶ್ವಶಾಂತಿ, ಮಾನವತೆಯ ಉಜ್ವಲ ಭವಿಷ್ಯ ಇವು ಅವರ ಕೇಂದ್ರ ವಿಚಾರಗಳು ಲಕ್ಷೆಟ್ಟಿಯವರ 'ಭಾಗ್ಯೋದಯ' ಕವಿತೆಗಷ್ಟೆಯಲ್ಲ ಲಕ್ಷೆಟ್ಟಿಯವರ ಸಮಗ್ರ ಕಾವ್ಯದ ಕೇಂದ್ರದ ಅಂಶವನ್ನು ಗುರುತಿಸುವಂಥದು.

'ಭಾಗ್ಯೋದಯ'ದ ಬೆನ್ನು ಹಿಂದೆಯೇ ಬಂದ ಎರಡನೇ ಕವನ ಸಂಕಲನ 'ಧ್ಯೇಯವಾದಿ' ಇದು ೧೯೬೧ರಲ್ಲಿ ಪ್ರಕಟಗೊಂಡಿತು. ಇಲ್ಲಿಯ ಬಹುಪಾಲು ಕವನಗಳು ವಸ್ತು, ಪ್ರೀತಿ–ಪ್ರೇಮ, ಕಾಮ ವಿರಹವಾಗಿದೆ. ಕೆಲವು ವ್ಯಕ್ತಿ ಚಿತ್ರಣಗಳು ಮೂಡಿಬಂದಿವೆ. ಈ ಸಂಕಲನವು ಒಟ್ಟು ಹದಿನಾರು ಕವನಗಳನ್ನೊಳಗೊಂಡಿರುವ ಕಿರು ಕೃತಿ.

ಈ ಕವನ ಸಂಕಲನವು ತಾನೂ ಬಾಳಿ, ಉಳಿದವರನ್ನೂ ಸರಿಯಾಗಿ ಬಾಳಿಸುವ ಹಂಬಲವುಳ್ಳ ಈ ಧ್ಯೇಯವಾದಿಯ ಹೃದಯಶೈಲದಿಂದ ಹರಿದು ಬಂದ ಈ ಕವನಗಳು ಸಹಜವಾದ ರಸಿಕತೆಯ ಬಳ್ಳಿಗೆ ಅರಳಿದ ಕುಸುಮಗಳಾಗಿವೆ. (ಎಸ್.ಡಿ.ಇಂಚಲ)

೧೯೭೦ರಲ್ಲಿ ಲಕ್ಷೆಟ್ಟಿಯವರು ಸೇವೆಸ್ಮರಣೆ ಎಂಬ ಕವನ ಸಂಕಲನವನ್ನು ಹೊರತಂದರು. ಸಾಮಾನ್ಯವಾಗಿ ಕವಿ ಮೂಲತ: ರಸಿಕ, ಪ್ರಕೃತಿಯ ಎಲ್ಲ ಪ್ರಲೋಭಗಳಲ್ಲಿಯೂ ಅವನಿಗ ಆನಂದ. ಈ ದೃಷ್ಟಿಯಿಂದ ಶ್ರೀ ಲಕ್ಷೆಟ್ಟಿಯವರ ಕವನಗಳನ್ನು ಲಕ್ಷಿಸಿದರೆ, ಇವರು ಸಂಪೂರ್ಣ ರೋಮ್ಯಾಂಟಿಕ್ ಸಂಪ್ರದಾಯದವರು. ಇವರ ಕವನಗಳಲ್ಲಿ ಕಂಡುಕೊಳ್ಳುವ ಮಿಶ್ರಗುಣ, ಅನುಕಂಪ, ಕರುಣೆ, ಪ್ರಸ್ತುತ ಇಲ್ಲಿಯ 'ಸೇವೆ ಸ್ಮರಣೆ'ಯಲ್ಲಿ ವೈಶಿಷ್ಟ್ಯಪೂರ್ಣವಾಗಿ ಐದು ಭಾಗಗಳನ್ನು ಮಾಡಿಕೊಂಡಿದ್ದಾರೆ.

- ❖ ಮೊದಲನೆಯ ಭಾಗದಲ್ಲಿ ಕವಿ ತನ್ನ ನಾಡು ನುಡಿಯನ್ನು ಮೆಚ್ಚಿಕೊಂಡು ಬರೆದ ಕವನಗಳು.
- ❖ ಎರಡನೆಯ ಭಾಗದಲ್ಲಿ ತಮಗೆ ಪ್ರೀಯರಾದ ಕವಿ, ಸಾಹಿತಿ, ಕಾದಂಬರಿಕಾರರನ್ನು ತಾವು ಕಂಡುಕೊಂಡಂತೆ ಅವರವರ ವ್ಯಕ್ತಿತ್ವದ ಹಂತಗಳನ್ನು ಗುರುತಿಸಿದ್ದಾರೆ.
- ❖ ಮೂರನೆ ಭಾಗ ಸ್ಮರಣೆಯಲ್ಲಿ ನಾಡಿಗಾಗಿ ಪ್ರಾಣತೆತ್ತ ಜವಾಹರಲಾಲ ನೆಹರು, ವಚನ ಸಾಹಿತಿಗಳಾದ ಬಸವಣ್ಣ, ಅಕ್ಕಮಹಾದೇವಿ ಸ್ಮರಿಸಿದ್ದಾರೆ.
- ❖ ನಾಲ್ಕನೆ ಭಾಗದಲ್ಲಿ ಕವಿ ತನ್ನ ನೋವು ನಲಿವಿನಲ್ಲಿ ಭಾವ ಹಾಗೂ ಭಾಷೆಗಳಿಗೆ ತೀರ ಪ್ರಾಮಾಣಿಕನಾಗಿದ್ದಾನೆ.
- ❖ ಐದನೇ ಭಾಗದಲ್ಲಿ ಇಲ ಚುಟುಕುಗಳನ್ನು ಪೋಣಿಸಿದ್ದಾರೆ.

ಸೇವೆಸ್ಮರಣೆ(೧೯೭೦) ಕವಿತೆ ಕುರಿತು – ಹಾಡು ಕಟ್ಟುವ ಕವಿ ನಾಡನ್ನೂ ಕಟ್ಟಬಲ್ಲ. ಕಟ್ಟಬೇಕಾಗಿದೆ ಇಂದು. ಈ ದಿಶೆಯಲ್ಲಿ ಬಾಳೇಶರ "ಯೋಧನಾಗು ತಾಯಿ ರಕ್ಷಣೆಗೆ" "ಕೈ ಮಾಡಿ ಕರೆಯುವಂತೆ ನಾಡಿನಂತ:ಕರಣ" "ಕೊನೆಯ ಎಚ್ಚರಿಕೆ" "ಯೋಜನಾ ಕುಮಾರಿ" ಈ ಕವನಗಳನ್ನು ಇಲ್ಲಿ ಉದಾಹರಿಸಬಹುದು. "ಯೋಜನಾ ಕುಮಾರಿ"ಯಲ್ಲಿ ಇವರ ಪ್ರತಿಭೆಯ ಪ್ರತಿಮೆಯಾಗಿ ರೂಪುಗೊಂಡಂತಿದೆ– ಡಾ. ಎನ್ಕೆ ಅಭಿಪ್ರಾಯಪಟ್ಟಿದ್ದಾರೆ.

---

೧೭ ವೀಣೆ (ಡಾ.ಲ.ಅ) ಎಚ್.ಎಸ್.ಬಿ ಪು. ೧/೭
-ಅದೇ-ಎಚ್.ಆಯ್.ಟಿ. ಅ.ನ. ಪು.೧/೭

೧೯೮೩ರಲ್ಲಿ 'ಯಕ್ಷಪ್ರಶ್ನೆ' ಕವನ ಸಂಕಲನ ಪ್ರಕಟವಾಯಿತು. ಆಧುನಿಕ ಕನ್ನಡ ಕಾವ್ಯಲೋಕದಲ್ಲಿ ಬಹುದೊಡ್ಡ ಹೆಸರು ಪಡೆದ ಶ್ರೀ ಬಾಳೇಶ ಲಕ್ಷೆಟ್ಟಿಯವರ 'ಯಕ್ಷಪ್ರಶ್ನೆ' ಒಂದು ಅತ್ಯುತ್ತಮ ಕವನ ಸಂಕಲನ. ಪ್ರಸ್ತುತ ಕವನ ಸಂಕಲನದಲ್ಲಿ ಹನ್ನೆರಡು ಕವನಗಳು ಮತ್ತು ಹದಿನೇಳು ಹನಿಗವನಗಳಿಂದ ರಚಿಸಲ್ಪಟ್ಟಿದೆ.

ಯಕ್ಷಪ್ರಶ್ನೆ ಕವನ ಸಂಕಲನವನ್ನು ಬೆನ್ನಟ್ಟಿಬಂದ ೧೯೮೫ರಲ್ಲಿ 'ಗಾಳಿಪಟ' ಕವನ ಸಂಕಲನ ಪ್ರಕಟಗೊಂಡಿತು. 'ಗಾಳಿಪಟ' ಬಾಳೇಶ ಲಕ್ಷೆಟ್ಟಿಯವರ ಐದನೆ ಕವನ ಸಂಕಲನ. ನಾಲ್ಕು ಸಂಕಲನಗಳನ್ನಿತ್ತ ಮೇಲೆ ಅದರ ನೋವು, ನಲಿವುಗಳನ್ನನುಭವಿಸಿ ಆದ ಮೇಲೆ, ಪ್ರಸವಿಸಿದ ಕೃತಿ ಎಂದಾಗ ಮೌಲಿಕತೆಯಲ್ಲಿ ಮೇಲಂತಸ್ತಿನಲ್ಲಿ ಇದೆ ಎಂದು ಹೇಳದೇ ಗತ್ಯಂತರವಿಲ್ಲ. ಅನುಭವದ ಕುಲುಮೆಯಲ್ಲಿ ಮತ್ತಷ್ಟು ಬೆಂದು ಬಂದ ಕೃತಿ "ಗಾಳಿಪಟ" ವಿವಿಧತೆಯನ್ನು ಒಳಗೊಂಡಿದೆ. ಯಕ್ಷ ಪ್ರಶ್ನೆ ? (೧೯೮೩) ಕುರಿತು ಶ್ರೀಮತಿ ಶಶಿಕಲಾ ವಸ್ತ್ರದ (ವೀರಯ್ಯಸ್ವಾಮಿ) ಯವರು "ಕಾವ್ಯದಂಥ ಸಂಕೀರ್ಣ ವಸ್ತುಗಳನ್ನು ಸಾಮಾನ್ಯನಿಗೂ ತಲುಪಿಸಬೇಕಾದ ಈ ಸಂಕ್ರಮಣದ ಕಾಲದಲ್ಲಿ ಶ್ರೀ ಬಾಳೇಶ ಲಕ್ಷೆಟ್ಟಿಯವರ ಕವನಗಳು ಮೊದಲ ಪಟ್ಟಿಯಲ್ಲೇ ಸ್ಥಾನವನ್ನು ಗಳಿಸಿರುವದೊಂದು ವಿಶೇಷ" ಎಂದಿದ್ದಾರೆ. ಕವಿಗಳ ಇತ್ತೀಚಿನ ಆಯ್ದ ಹನ್ನೆರಡು ಕವಿತೆಗಳನ್ನು ಒಳಗೊಂಡ ಈ ಕೃತಿ ವಿಷಯ ವೈವಿಧ್ಯತೆಯನ್ನು ಒಳಗೊಂಡಿದೆ. ಒಂದು ಕಡೆ ಕವಿಗಳು ಸಮಾಜದ ಇಂದಿನ ಅನ್ಯಾಯ, ಆಗುಹೋಗುಗಳನ್ನು ಕಂಡು ರೋಸಿಹೋಗಿ ಕೆಚ್ಚಿನ ಭಾವನೆಯನ್ನು ವ್ಯಕ್ತಪಡಿಸಿದ್ದು ಕಂಡುಬರುತ್ತದೆ.

೧೯೮೭ರಲ್ಲಿ 'ತೋಳ ಬಂದಾವೋ ತೋಳ' ಕವನ ಸಂಕಲನವು ಶ್ರೀ ಬಾಳೇಶರ ಇಡೀ ಸಂಕಲನದಲ್ಲಿನ ಮಹತ್ವದ ಕವನ ಸಂಕಲನವಾಗಿ ಪ್ರಕಟಗೊಂಡಿದೆ. 'ತೋಳ ಬಂದಾವೋ ತೋಳ" ಕವನ ಸಂಕಲನ ಕುರಿತು ನೀಲಗಂಗಾ ಚರಂತಿಮಠರವರು "ಈ ಕವನ ಸಂಕಲನ ಮನುಷ್ಯ ಜೀವನದಲ್ಲಿ ಎದುರಿಸುತ್ತಿರುವ ಸಮಸ್ಯೆಗಳಿಗೆ ಹಿಡಿದ ಕನ್ನಡಿ"ಯಾಗಿದೆ ಎಂದಿದ್ದಾರೆ. "ತೋಳ ಬಂದಾವೋ ತೋಳ"ದಲ್ಲಿ ಸುತ್ತಲಿನ ಪರಿಸರಕ್ಕೆ ಸ್ಪಂದಿಸುತ್ತ ತಮ್ಮ ಅನುಭವದ ತೀವ್ರತೆಯನ್ನು ಕಾವ್ಯಸ್ತರದಲ್ಲಿ ಹೊಮ್ಮಿಸುವ ಪ್ರಯತ್ನಕ್ಕಿಳಿದಿದ್ದಾರೆ. ಕವಿಯ ಸಾತ್ವಿಕ ರೋಷವನ್ನು ಕೆರಳಿಸಿದ ಸಂಗತಿಗಳ ವಿವರಣೆಯಿರುವ ಕವಿತೆಗಳಿಗೆ ಈ ಸಂಕಲನದಲ್ಲಿ ಬಹುಪಾಲು" ಎಂದು ಪ್ರೇಮಾ ತಾಶೀಲದಾರ ಅರುಹಿದ್ದಾರೆ. ಇದರಲ್ಲಿ ಕವಿ ಜೀವನದಲ್ಲಿ ಕಡುನೊಂದ ಜೀವಿ. ನಾಡಿನ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗಗಳಲ್ಲಿನ ಭ್ರಷ್ಟತೆ, ಡಾಂಬಿಕತೆ ಮತ್ತು

ಆಷಾಢಭೂತಿತನವನ್ನು ಕಂಡು ಕೆರಳುವ, ಸಾತ್ವಿಕ ರೋಷದ ಸೃಜನಶೀಲ ಮನಸ್ಸು, ಬದುಕಿನ ವೈರುಧ್ಯಗಳನ್ನು ಕಂಡು ತನ್ನ ನೋವನ್ನೆಲ್ಲ ತನ್ನ ಸುತ್ತಲಿನವರ ನೋವಿನೊಂದಿಗೆ ಹೊಂದಿಸಿಕೊಳ್ಳುತ್ತ; ಅನೇಕ ರೀತಿಯ ವಿವೇಚನೆಗೆ ಒಳಗಾಗಿರುವ ಪರಿ ಮನಸ್ಸಿಗೆ ತಟ್ಟುವಂಥದು, ಈ ಕವಿ ಹೃದಯದ ಮರುಕು ಈ ಸಂಕಲನದುದ್ದ ಅನೇಕ ಕವಿತೆಗಳಲ್ಲಿ ಧ್ವನಿಸುತ್ತದೆ.

'ಭಾಗ್ಯೋದಯ'ದಿಂದ 'ತೋಳ ಬಂದಾವೋ ತೋಳ' ದ ವರೆಗೆ ಎಂಟು ಕವನ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ೧೯೫೭ ರಿಂದ ೧೯೮೭ರ ವರೆಗಿನ ಅವಧಿಯಲ್ಲಿ ಇವರ ಕವನಗಳು ಪ್ರಕಟವಾದ ಸಮಯ. ಭಾವಗೀತೆಗಳ ಸಂಕ್ರಮಣದ ಈ ಕಾಲದಲ್ಲಿ ಬಾಳೇಶ ಲಕ್ಷೆಟ್ಟಿಯವರ 'ಭಾವಸುರಭಿ' ಭಾವಗೀತೆಗಳ ಸಂಕಲನ ಪ್ರಕಟವಾದದ್ದು ನಿಜಕ್ಕೂ ಕನ್ನಡ ಸಾಹಿತ್ಯದ ಸಹೃದಯರಿಗೆ ಆನಂದವನ್ನು ನೀಡುವ ಸಂಗತಿ.

ಶ್ರೀ ಬಾಳೇಶ ಲಕ್ಷೆಟ್ಟಿಯವರು ಕವನ ಸಂಕಲನಗಳ ಜೊತೆಗೆ ಚುಟುಕು ಮತ್ತು ಹನಿಗವನಗಳನ್ನು ಬರೆದು, ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಚುಟುಕಿನ ಚಟಾಕಿ, ಹನಿಗವನದ ಹೆಜ್ಜೇನಿನ ರಸಸ್ವಾದವನ್ನು ಕನ್ನಡಿಗರಿಗೆ ಉಣಿಸಿದ ಕೀರುತಿ ಇವರದು.

ಜಗದ ಮಲ್ಲ, ಕಹಿಜೇನು, ವಾಂತಿಭೇದಿ, ವೀರಗರತಿ, ಪುಢಾರಿ ಪುಟ್ಟ, ಹೃದಯಶೂನ್ಯ, ಕನ್ನಡ ಕುಲರತ್ನ, ಹಾಲ ಚಾತುರ್ಯ, ನಮ್ಮೂರ ಮಾಸ್ತರ, ಕತ್ತಿ ಕಾಳಗ, ಕಲಿಯುಗದ ಕರ್ಣ, ಗಾದಿ ಮೋಹ, ಸಮಿಶ್ರ ದರಬಾರ, ಮಾತು ಮಾಣಿಕ ಮುತ್ತು, ಲಾಯಿಟು ಮತ್ತು ಚಿಮಣಿ, ಗರತಿ ತಂಗ, ನವ್ಯಕವಿ, ರಾಣಿಮಹಲ, ಪ್ರೇಮ ಫಲ, ಮಡಿವಂತಿ, ದೇವಪುರುಷ, ಗಾಂಧೀಜಿ ಹೆಸರಿನಲ್ಲಿ, ಕವಿ ಮುದ್ದಣ ಮತ್ತು ನಾವು, ಗಡಿನಾಡ ಗಾಂಧಿ, ಅಂದಿನ ವಿದ್ಯಾರ್ಥಿ, ಇಂದಿನ ವಿದ್ಯಾರ್ಥಿ, ಬೆದರಿಕೆ ಪತ್ರ, ಆಧುನಿಕ ಪ್ರವಾದಿ, ದೊಡ್ಡ ಮನುಷ್ಯ, ಅಕಾಲಿಕ ವೃದ್ಧಾಪ್ಯ, ಬೇಂದ್ರೆ ಕಾವ್ಯ, ಕವಿ ಇಂಚಲರಿಗೆ, ವಿ.ಸೀ, ನೀರುಗುಳಿ, ಪಶು-ಪಶುಪತಿ, ಫಾರವಡಾ ಗೃಹಿಣಿ, ಆತ್ಮೀಯ ಎಚ್ಚರಿಕೆ, ಯಕ್ಷ ಪ್ರಶ್ನೆ, ನನ್ನ ಬದುಕು, ಇನ್ನೂತನಕ ಕಲೀಲಿಲ್ಲ, ಕೋಳಿಗೆ, ಆದರೂ ನಾವು ದೊಡ್ಡವರು, ಜೀವ ನೂತನ ಚೇತನ, ನಮ್ಮಾತ್ಮ ಕೂಗುತಿವೆ. ಕರ್ನಾಟಕ ಪುರುಷ, ಆತ್ಮ ನಿವೇದನೆ, ಬರೆಯಬಲ್ಲೆಯಾ ಇಂಥ ಚಿತ್ರವ? ಬದುಕಿಗಾಸರೆ, ವ್ಯಥೆ.

ಶ್ರೀ ಬಾಳೇಶ ಲಕ್ಷೆಟ್ಟಿಯವರು ಚುಟುಕುಗಳ ಜೊತೆಗೆ ಹನಿಗವನಗಳನ್ನು ಕನ್ನಡ ಕಾವ್ಯಲೋಕಕ್ಕೆ ನೀಡಿದ್ದಾರೆ. ಓರ್ವ ದೇಶಭಕ್ತನಿಗೆ, ಕಲ್ಪನಾ ಪ್ರಪಂಚ, ಓರ್ವ ತರುಣಿ, ಶುದ್ಧ ಕಸಬು, ಭೀಮು ಅಣ್ಣನ ಮಾತು, ಅಜ್ಜನ ಕನಸು, ಪ್ರಾರ್ಥನೆ, ಬಿಳಿಯಾನೆ, ನಾರಿ ಕಲಿಸಿದ

ಪಾತ, ಅಧಿಕಾರ ಮಹಿಮೆ, ಅಧಿಕಾರದ ಉನ್ಮಾದ, ಒಂದು ಪ್ರಶ್ನೆ, ದೇಶವೆಂಬ ಮದ್ದುನೆಗೆ, ನಟನೆ ನೈಜತೆ, ನ್ಯಾಯವೆ ಬಂಧು? ನಮ್ಮ ಅಣ್ಣಾ, ಗಾಳಿಪಟ, ಸಾಹೇಬ್ರು ಬೀಜ, ಹೃದಯ ಮಿಡಿತ ಬೆಳಕನ್ನೇ ತೂಗುತ್ತೇನೆ, ನ್ಯುಮೋನಿಯಾ ಪೀಡಿತನಾದಾಗ, ನಮನ, ಕೃತಜ್ಞತೆಯ ಕಾಣಿಕೆ, ಲಹರಿ, ಹುಡುಗೀ, ಗುತ್ತಿಗೆದಾರ, ನವಯುಗದ ವಿರಾಗಿ, ತೋಳ ಬಂದಾವೋ ತೋಳ, ಮಾವು ಬೇವಾದಾಗ, ಏನೈತ್ಯೋ. . . . .ಏನೈತ್ಯೊ, ಈ ಮರದ ಕೆಳಗೆ, ಮಾಡೋದ್ನೆಲ್ಲಾ ಮಾಡಿದಿರಿ, ಪುರಾಣಿಕರಿಗೆ, ಕೊಡಿ ಸ್ವಾಮಿ ಕೊಡಿ, ಸತ್ಯವಾನ ಸಾಯುವನೆ?, ನಮ್ಮ ರಾಜಕುಮಾರರು, ಆಶೆ, ಆರೈಕೆ, ನಾ ಸಹರಾ, ಅಟಲಜಿ, ಎಪ್ಪತ್ತೇಳರ ರವಿತೇಜ, ಮುಖವಾಡಗಳು, ಹೀಂಗ ನಡೆದರ ಹೆಂಗ ಗೆಳತಿ, ಅಣ್ಣನ ಆಗಮನ, ಬರಲಿ ವರುಷ, ಆಚಾರ–ವಿಚಾರ, ವಿಧಿಗೆ, ಒಳಧ್ವನಿ, ನೀರೀಕ್ಷೆಯಲ್ಲಿ ಎಪ್ಪತ್ತೈದರ ಸಿದ್ಧಿಸುವರ್ಣ, ಅದುವೆ ನಮ್ಮಯ ಮುಕ್ತಿಮಂದಿರ, ಬಾಗಿಲಿಲ್ಲದ ಮನೆ, ಮನವಿ, ಪಯಣ, ಕಾಲಮಹಿಮೆ, ಕವಿ, ಕಾಲದಕರೆ, ಪಂಚಗಾವಿಯವರ ನೆನಪು, ಸಿದ್ಧಲಿಂಗ, ಸೃಷ್ಟಲಯ, ಧೀ:ಶಕ್ತಿ, ಪುಟ್ಟ ಗುಲಾಬಿಗೆ, ಸೂರ್ಯ ಬಿಂಬದ ಹೊಳೆಯುವ ಕಣ್ಣು, ತವಗದ ಕಲ್ಪತರು, ಬಾಳಯ್ಯಸ್ವಾಮಿ, ತಾನೆ ಮುನ್ನುಡಿಯಾದನು, ಜಗಕೆಲ್ಲ ಹಬ್ಬೇತಿ ನಿನಕೀರ್ತಿ, ಸಾರ್ಥಕ ಪಯಣ, ಯಾವದಾರಿಯ ತುಳಿಯಲಿ, ಮೂಜಗಂ ಮರೆಯಾದಾಗ, ಗ್ರಹಣ, ಮಿಣಚಿ, ಕಡಲದೋಣಿ, ಆಶಯ, ನನ್ನ ಕನಸು, ಮಿತ್ರ ನಡೆದನು ಮರೆಗೆ, ಕಾಲಚಕ್ರ, ಶ್ರೀ ಸಿದ್ಧೇಶ್ವರ ಶ್ರೀ, ಏನು ಮಾತನಾಡಲಿ ಗೆಳೆಯ, ಭಯೋತ್ಪಾದನೆ, ಸಪ್ತ ಋಷಿಗಳು, ನಾನು ಯಾರು, ನಿಂಗಣ್ಣ ಸಣ್ಣಕ್ಕಿ ಮತ್ತು ನಾನು, ಚೆಂಬೆಳಗಿನ ಬೆಳಕು, ಜಿ.ಎಸ್.ಸಾಸನೂರ, ಪ್ರೊ. ಚಂದ್ರಶೇಖರ ಅಕ್ಕಿ, ರವೀಂದ್ರ ಸೋರಗಾವಿ, ಟಿ.ಸಿ.ಮೊಹರೆ, ಏನು ಮಾಡಿದರೂನು, ಜಗದೀಶ ಮಹಾಂತೇಶ ಸಾಧನೆ. ಶುಭವ ಹಾರೈಸುವೆನು ಬಸಗೌಡರಿಗೆ.

ಶ್ರೀ ಲಕ್ಷೆಟ್ಟಿಯವರ ಕವನಗಳನ್ನು ಲಕ್ಷಿಸಿದರೆ, ಇವರು ಸಂಪೂರ್ಣ ರೋಮ್ಯಾಂಟಿಕ್ ಸಂಪ್ರದಾಯದವರು. ಇವರ ಕವನಗಳಲ್ಲೆಲ್ಲ ಕಂಡುಕೊಳ್ಳುವ ಮುಖ್ಯಗುಣ, ಅನುಕಂಪ, ಕರುಣೆ, ಕಾವ್ಯ ಕೃಷಿಯಲ್ಲಿ ನಿರತರಾದ ಕೆಲವೇ ಕೆಲವು ಶ್ರದ್ಧಾವಂತ ಕವಿಗಳಲ್ಲಿ ಶ್ರೀ ಲಕ್ಷೆಟ್ಟಿಯವರೂ ಒಬ್ಬರು. ಇವರ ಕಾವ್ಯದಲ್ಲಿ ಅನುಭವದ ತೀವ್ರತೆ ಇದೆ. ನೈಜಭಾವ ಸೌಂದರ್ಯವಿದೆ, ಲೋಕಾನುಭವದ ತಿರುಳಿದೆ. – ಡಾ. ಸೋಮಶೇಖರ ಇಮ್ರಾಪೂರ ಹೇಳುವ ಮಾತು ಲಕ್ಷೆಟ್ಟಿಯವರ ಕಾವ್ಯದ ಜೀವಂತಿಕೆ ಹೇಳುತ್ತದೆ.

ಗಾಳಿಪಟ (೧೯೮೫) ಕವನ ಸಂಕಲನ ಕುರಿತು ಡಾ. ಸಿಂಪಿ ಲಿಂಗಣ್ಣನವರು ತಪಸ್ವಿನಿಯಾದ ಗಿರಿಜೆಯು, ವಟುವೇಷದಲ್ಲಿದ್ದರೂ ಇಂದುಧರನನ್ನು ಗುರುತಿಸಬಲ್ಲಳು, ಇಲ್ಲಿಯ ಕವನಗಳು ಯಾವ ವೇಷ-ಭಾಷೆಗಳಲ್ಲಿ ಮೂಡಿ ನಿಂತರೂ ಕವಿತ್ವದ ಕೆಂಗಡಿಯ ಕುರುಹು ಕಳಕೊಂಡಿಲ್ಲ. ಕೋಮಲ ಮನಸ್ಸಿಗೆ ಸಹೃದಯತೆ ಸೋಕಿದಂತಿದೆ. ಗಾಳಿಪಟಕ್ಕೆ ದಾರವೇ ಆಧಾರವೆಂದು ನಾವೆಲ್ಲರೂ ತಿಳಿದಿದ್ದೇವೆ. ಆದರೆ ಆ ದಾರವನ್ನು ಗಟ್ಟಿಯಾಗಿ ಹಿಡಿದ ಗಟ್ಟಿಗ ಕೈಯೊಂದಿದೆಯಂಬುದನ್ನು ಲೆಕ್ಕಿಸುವುದಿಲ್ಲ.

ಬಾಳೇಶರ ಅಟಲ್‌ಜಿ ಮತ್ತು ಇತರ ಕವಿತೆಗಳು (೨೦೦೩) ಕುರಿತು ಈ ಸಂಗ್ರಹದಲ್ಲಿಯ ಹಲ ಕವಿತೆಗಳು ಸಮಾಜದ ಓರೆ-ಕೋರೆಗಳನ್ನು ನಿಮ್ಮೆದುರಿಗೆ ತಂದು ನಿಲ್ಲಿಸುತ್ತವೆ. ಇನ್ನು ಕೆಲವು ಒಳಿತನ್ನು ಹೆಚ್ಚು ಒಳಿತು ಆಗುವುದನ್ನು ಕುರಿತು ಹೇಳುತ್ತದೆ ಎನ್ನುತ್ತಾರೆ ಡಾ. ಪಂಚಾಕ್ಷರಿ ಹಿರೇಮಠ.

ಡಾ. ಅ.ರಾ.ತೋರೊರವರು ಈ ಸಂಗ್ರಹದಲ್ಲಿ ೨೪ ಕವನಗಳು ಲಕ್ಷೆಟ್ಟಿಯವರ ಪ್ರತಿಭೆಯ ಬೆಳವಣಿಗೆ ಸೂಚಿಸುತ್ತವೆ. ಶ್ರೀ ಅಟಲಬಿಹಾರಿ ವಾಜಪೇಯಿಯವರ ಬಗ್ಗೆ ಬರೆಯುವಾಗ ಅಟಲಜಿಯವರ ರಾಷ್ಟ್ರಭಕ್ತಿ, ಅವರ ಕಾವ್ಯಶಕ್ತಿ, ರಾಜಕಾರಣದಲ್ಲಿ ಕಾಣುವ ಅಪರೂಪವಾದ ಅವರ ಸಜ್ಜನ ಶಕ್ತಿ ಇವು ನವಮನ್ವಂತರದ ಯುಗಾದಿ ಎಂದು ಕವಿ ವರ್ಣಿಸುತ್ತಾನೆ.

ಲಕ್ಷೆಟ್ಟಿ ಆತ್ಮಚಿಂತನೆ ಪ್ರಚಾರಮಟ್ಟಕ್ಕೆ ಇಳಿಯುವುದಿಲ್ಲ. ಇದೇ ಅವರ ಕವಿತೆಯ ಸಾಮರ್ಥ್ಯ ಎನಬಹುದು.

ಏನು ಮಾತನಾಡಲಿ ಗೆಳೆಯ! (೨೦೦೪) ಕವನ ಕುರಿತು ಡಾ.ಸಿ.ಕೆ.ನವಲಗೆಯವರ ಲಕ್ಷೆಟ್ಟಿಯವರು ಸಹೃದಯಿ, ಮಾನವಾಂತಃಕ್ಕರಣದ ಪ್ರೀತಿ ತುಂಬಿದ ಕೊಡ. ಅಂತೆಯೇ ತನ್ನ ಸ್ನೇಹವಲಯದಲ್ಲಿ ಬಂದವರನ್ನು, ತನ್ನ ಮನಮಿಡಿದ ಬರಹಗಾರರನ್ನು, ಸಣ್ಣವರು – ದೊಡ್ಡವರು ಎನ್ನದೆ, ಯಾವ ಪೂರ್ವಾಗ್ರಹವೂ ಇಲ್ಲದೆ, ಮುಕ್ತ ಮನದಿಂದ, ಅವರೆಲ್ಲರ ಬಗೆಗೆ ತನಗಿರುವ ಭಾವಾಲೋಚನೆಗಳನ್ನು ಕವಿತೆಯ ಮೂಲಕ ನಿರೂಪಿಸಿ, ತನ್ನ ಕವಿ ಹೃದಯದ ವೈಶಾಲ್ಯತೆಯನ್ನು ಮೆರೆದಿದ್ದಾರೆ ಎಂದು ಅರುಹಿದ್ದಾರೆ.

ಮನಮುಟ್ಟಬಲ್ಲ ಸರಳ ಭಾಷೆ, ನಿರರ್ಗಳ ನಿರೂಪಣೆ, ನವುರಾದ ವಿಡಂಬನೆ, ನಿರಾಡಂಬರದಲ್ಲಿಯ ಒಂದು ಸೊಬಗು– ಇವರ ಬಹಳಷ್ಟು ಕವಿತೆಗಳಲ್ಲಿ ಮೈದುಂಬಿಕೊಂಡಿದೆ. ಜೀವನದಲ್ಲಿ ಸಿಹಿಗಿಂತ ಕಹಿಯುಂಡ ಜೀವನ ಲಕ್ಷೆಟ್ಟಿಯವರದು.

ನೋವಿನ ಅನುಭವವುಂಡ ಜೀವದಿಂದ ಮೂಡಿಬಂದ ಕಾವ್ಯದಲ್ಲಿ ಒಂದು ಗಟ್ಟಿಗುಣ ಇರುವುದನ್ನು ಗುರುತಿಸಬಹುದು. ವೈಯಕ್ತಿಕ, ಸಾಮಾಜಿಕ, ರಾಜಕೀಯ ಎಲ್ಲದರ ಬಗೆಗೆ ಇವರ ಕಾವ್ಯ ಸ್ಪಂದಿಸುವಲ್ಲಿ ತನ್ನ ಸ್ವಂತಿಕೆಯನ್ನು ತೋರಿಸಿಕೊಂಡಿದೆಯೆಂಬುದು ಮೆಚ್ಚುವ ಸಂಗತಿ.

ಮನುಷ್ಯ ಜೀವನ ವಿಸ್ತಾರವಾದುದು. ಅಂತೆಯೇ ಅನುಭವವೂ ವಿಸ್ತಾರವಾದುದು. ಅನುಭವದ ಮೇಲೆಯೆ ಮನುಷ್ಯ ತನ್ನ ಬದುಕನ್ನು ಮುನ್ನಡೆಸುತ್ತಾನೆ. ಇವರ ಕಾವ್ಯದಲ್ಲಿಯೂ ಅಂಥ ಅನುಭವದ ಎಲೆಗಳು ಗೋಚರಿಸುತ್ತವೆ. ಗುಣದ ದೃಷ್ಟಿಯಿಂದ ಕಾವ್ಯದಲ್ಲಿ ಶ್ರೇಣಿಯಿದ್ದರೂ, ಕಾವ್ಯ ಬದುಕಲು ಬದುಕುವುದು ಅನುಭವದ ಪೌಷ್ಟಿಕ ಆಹಾರದಿಂದ. ಯಾವ ಮನುಷ್ಯ ಜನರ ಬದುಕಿಗೆ ಎಷ್ಟು ಹತ್ತಿರದವನಾಗುವನೋ, ಎಷ್ಟು ಜನರಿಗೆ ಆತ್ಮೀಯನೆನಿಸುವನೋ ಅಷ್ಟು ಆತ ಒಳ್ಳೆಯ ಮನುಷ್ಯ ಯಾವ ಸಾಹಿತ್ಯ ಜನತೆಯ ಬದುಕಿನಾಳಕ್ಕಿಳಿದು, ಅಲ್ಲಿನದನ್ನು ಮೈಗೂಡಿಸಿಕೊಂಡು, ಅವರ ಬದುಕಿಗೊಂದು ಬೆಳಕು ನೀಡುವ ಭರವಸೆ ನೀಡುವುದೊ ಅದು ಒಳ್ಳೆಯ ಸಾಹಿತ್ಯ. ಬದುಕಿಗೆ ಹತ್ತಿರವಾಗದ ಸಾಹಿತ್ಯ ಶ್ರೇಷ್ಠವಾಗಿದ್ದರೂ ನಿರರ್ಥಕ. ಆ ದೃಷ್ಟಿಯಿಂದ ಒಪ್ಪಂದದ ಬದುಕಿಗೆ ಸ್ಪಂದಿಸಬಲ್ಲ ಲಕ್ಷೆಟ್ಟಿಯವರ ಕಾವ್ಯ ಅರ್ಥಪೂರ್ಣ.

ಕಾವ್ಯ ಮೂಲತಃ ಒಂದು ಅನುಭವ ವಿಷಯ. ಈ ಒಂದು ಅನುಭವ ವಿಶೇಷವೇ ಕಾವ್ಯದ ಮೊದಲೂ ಹೌದು, ತುದಿಯೂ ಹೌದು; ಪ್ರೇರಣೆಯೂ ಹೌದು, ಪ್ರಯೋಜನವೂ ಹೌದು. ಕವಿಗೊದಗುವ ಲೋಕಾನುಭವ ಜನ್ಯವಾದ ಒಂದು ಅನುಭವ ವಿಶೇಷವನ್ನು, ಓದುಗನ 'ಅನುಭವ ವಿಷಯ' ವನ್ನಾಗಿಸಲು ಒದಗಿಬರತಕ್ಕವು. ಭಾಷೆ, ಛಂದಸ್ಸು, ಪ್ರತಿಮೆಗಳು ಇತ್ಯಾದಿ; ಬೇರೊಂದು ಮಾತಿನಲ್ಲಿ ಹೇಳುವುದಾದರೆ, ಈ ಅನುಭವ ವಿಷಯವನ್ನು ಕಟ್ಟಿಕೊಡುವ ಶಬ್ದಾರ್ಥ ರೂಪದ ಅಭಿವ್ಯಕ್ತಿಗಳು. ಹಾಗೆಂದರೆ ಈ ಶಬ್ದಾರ್ಥ ರೂಪದ ಸಾಮಗ್ರಿ ಕೇವಲ ಗೌಣವೆಂದೂ, ಹೊರಗಿನದು ಮಾತ್ರವೆಂದೂ ಅರ್ಥವಲ್ಲ. ಅವುಗಳಿಲ್ಲದೆ ಅನುಭವ ವಿಷಯವನ್ನು ಕಟ್ಟಿಕೊಡುವದಾಗಲಿ, ಆ ಮೂಲಕ ಬೇರೊಂದು ಮನಸ್ಸಿಗೆ ಮುಟ್ಟಿಸುವುದಾಗಲೀ ಸಾಧ್ಯವೇ ಇಲ್ಲ. ಹೀಗೆ ಶಬ್ದಾರ್ಥ ರೂಪದ ಅಭಿವ್ಯಕ್ತಿಯಲ್ಲಿ ಮೈಪಡೆದುಕೊಳ್ಳುವ ಅನುಭವ ವಿಶೇಷವೇ ಕಾವ್ಯ. ಬಾಳೇಶ ಲಕ್ಷೆಟ್ಟಿಯವರ ಕಾವ್ಯ ಇವುಗಳಿಂದ ಹೊರತಿಲ್ಲ, ಕಾವ್ಯದ ಕಟ್ಟಳೆಗಳನ್ನು ಮನಗಂಡ ಕಾವ್ಯ ರಚಿಸಿದ ಸವ್ಯಸಾಚಿ ಕವಿ ಬಾಳೇಶ ಲಕ್ಷೆಟ್ಟಿ.

---

೧೮. ನಿರಂತರ (ಬಾ.ಲ.ಕಾವ್ಯ ಸಂಪುಟ) ಸಂ.ಡಾ.ಎಚ್.ಆಯ್.ತಿಮ್ಮಾಪೂರ
೧೯. ವೀಣೆ (ಬಾ.ಲ.ಅ.) ಸಂ. ಡಾ.ಎಚ್.ಆಯ್.ತಿಮ್ಮಾಪೂರ ಪು.೬೫. ೭೫

ಕಾವ್ಯಾಭಿವ್ಯಕ್ತಿಯಲ್ಲಿ ಒಂದಿಷ್ಟು ಕಂಡುಬರುವ ಗದ್ಯತನ-ಶಿಥಿಲತನದಿಂದ ಮುಕ್ತವಾದಲ್ಲಿ, ಇವರ ಕಾವ್ಯ ಇನ್ನಿಷ್ಟು ಮೈದುಂಬಿಕೊಂಡು ಶೋಭಿಸುವದೆಂಬಲ್ಲಿ ಸಂದೇಹವಿಲ್ಲ. ಆದರೂ ಜೀವನ ವಿಸ್ತಾರದ ಸರ್ವ ಮುಖಗಳನ್ನೊಳಗೊಂಡ ಲಕ್ಷ್ಟೆಟ್ಟಿಯವರ ಕಾವ್ಯ-ಕನ್ನಡ ಭಂಡಾರಕ್ಕೆ ತನ್ನ ಪಾಲಿನ ಕೊಡುಗೆಯನ್ನು ನೀಡಿ ಕೃತಾರ್ಥವಾಗಿದೆ ಎಂದು ಹೇಳಬಹುದು.

ಇಲ್ಲಿಯವರೆಗೆ ಬರೆದ ಕವನಗಳನ್ನು ನೋಡಲಾಗಿ, ಲಕ್ಷ್ಟೆಟ್ಟಿಯವರು ಆಧುನಿಕ ಕನ್ನಡ ಕಾವ್ಯದ ಎಲ್ಲ ಮಜಲುಗಳಿಗೂ ತಮ್ಮನ್ನು ಒಡ್ಡಿಕೊಂಡವರು. ಆದರೆ ಯಾವುದಕ್ಕೂ ಅಂಟಿಕೊಂಡಿಲ್ಲ. ಹೀಗಾಗಿ ಇವರ ಕಾವ್ಯಕ್ಕೆ ನಿಶ್ಚಿತ ವಸ್ತು, ಶೈಲಿ, ದೃಷ್ಟಿಕೋನ ಇರುವುದಿಲ್ಲ. ಕಾಲದಿಂದ ಕಾಲಕ್ಕೆ ಇವೆಲ್ಲವೂ ಬದಲಾಗಿರುವುದನ್ನು ಅವರ ಕವನಗಳಲ್ಲಿ ಕಾಣಬಹುದು. ಈ ದೃಷ್ಟಿಯಿಂದ ಲಕ್ಷ್ಟೆಟ್ಟಿಯವರ ಕಾವ್ಯ ಅಮೀಬಾದಂಥ ಕಾವ್ಯ ಎನ್ನಬಹುದು. ಅಮೀಬಾಕ್ಕೆ ನಿಶ್ಚಿತ ಆಕಾರ, ರೂಪ, ಬಣ್ಣ ಇರುವುದಿಲ್ಲ, ಅದು ಬದಲಾಗುತ್ತಲೇ ಇರುತ್ತದೆ. ಆದರೂ ಜೀವಂತಿಕಿಯಿಂದ ತುಂಬಿರುತ್ತದೆ. ಅದೇ ಮುಖ್ಯ. ಈ ತರಹದ ಸಂಗತಿ ಲಕ್ಷ್ಟೆಟ್ಟಿಯವರ ಕವನ ಸಂಕಲನಗಳಲ್ಲಿ ಕಾಣುತ್ತೇವೆ.

---

೨೦. ಕಾವ್ಯಾರ್ಥ ಚಿಂತನೆ- ಡಾ.ಜಿ.ಎಸ್.ಎಸ್. ಪು.೨೨೦

# ಅಧ್ಯಾಯ-ನಾಲ್ಕು

## ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯದ ಸ್ತರಗಳು

ಬಾಳೇಶ ಲಕ್ಷೆಟ್ಟಿಯವರದು ಬಹುಮುಖಿಯಾದ ಪ್ರತಿಭೆ. ಹಳ್ಳಿಯಿಂದ ಶಹರದವರೆಗೆ ಓಡುತ್ತ, ಓದುತ್ತ ಈ ಬಾಲ ಬಾಳೇಶ ಬೆಳೆದು ಬಾಳಿದ ಬದುಕು ಅಭ್ಯಾಸಯೋಗ್ಯವಾದದ್ದು. ಅವರು ಕಷ್ಟದಿಂದ ಶೃದ್ಧೆಯಿಂದ ಕಲಿತರು: ಮುಂದೆ ಓಜನಾದ ಮೇಲೆ ಇಷ್ಟದಿಂದ ಪ್ರೀತಿಯಿಂದ ಕಲಿಸಿದರು. ಭೋಧನೆಯ ಜೊತೆಜೊತೆಯಲ್ಲಿಯೇ ಸಾಹಿತ್ಯ ಕೃಷಿಯನ್ನೂ ಮಾಡಿದರು. ಅವರು ಏಕಮುಖಿಯಾಗಿ ಹೊರಟ ಲೇಖಕರಲ್ಲ, ಬಹುಮುಖಿಯಾಗಿ ಬಗೆಬಗೆಯ ಬರವಣಿಗೆ ಕೃಷಿ ಮಾಡಿದ ಬರಹಗಾರರು. ಪುಂಖಾನುಪುಂಖವಾಗಿ ಅವರ ಲೇಖನಿಯಿಂದ ಕೃತಿಮಾಲೆ ಪ್ರಕಟವಾಗಿದೆ. ಕವಿತೆ, ಕಥೆ, ಜೀವನ ಚರಿತ್ರೆ, ಕಾದಂಬರಿ, ಮಕ್ಕಳ ಸಾಹಿತ್ಯ, ಪತ್ರ ಸಾಹಿತ್ಯ, ಅಂಕನ ಸಾಹಿತ್ಯ, ಗ್ರಂಥ ಸಂಪಾದನೆ, ಸಂಸ್ಮರಣ ಗ್ರಂಥಗಳು ಹೀಗೆ ಸಾಗಿದೆ–ಅವರ ಸಾಹಿತ್ಯದ ಹರವು.

ಬಾಳೇಶ ಲಕ್ಷೆಟ್ಟಿಯವರ ಕಾವ್ಯಕ್ಕೆ ವಿಸ್ತಾರ ಒಂದು ಮುಖ, ವೈವಿದ್ಯ ಇನ್ನೊಂದು ಮುಖ. ಲಕ್ಷೆಟ್ಟಿಯವರ ಕಾವ್ಯದಲ್ಲಿ ಪ್ರಕೃತಿ ನೆಲೆ, ಪ್ರೀತಿ ಪ್ರೇಮದ ನೆಲೆ, ದಾಂಪತ್ಯದ ನೆಲೆ, ಸಾಮಾಜಿಕ ನೆಲೆ, ಮಾತೃಭೂಮಿಯ ನೆಲೆ, ಪ್ರಗತಿಪರ ಬಂಡಾಯದ ನೆಲೆ, ಭ್ರಷ್ಟಾಚಾರದ ನೆಲೆ, ಶೋಷಣೆಯ ನೆಲೆ, ಐತಿಹಾಸಿಕ ವ್ಯಕ್ತಿಗಳ ನೆಲೆ ಹಾಗೂ ಸ್ತ್ರೀ ಸಂವೇದನೆಯ ನೆಲೆ ಹೀಗೆ ಹತ್ತು ಹಲವು ಸಾಮಾಜಿಕ, ಧಾರ್ಮಿಕ ಹಾಗೂ ನೈತಿಕ ಅಂಶಗಳ ಮೇಲೆ ಎಣೆಯಲ್ಪಟ್ಟ ಕವಿತೆಯ ಸಾಲುಗಳು ಬಾಳೇಶ ಲಕ್ಷೆಟ್ಟಿಯವರದು.

### ೪.೧ <u>ಪ್ರಕೃತಿ</u>

ಶ್ರೀ ಬಾಳೇಶ ಲಕ್ಷೆಟ್ಟಿಯವರ ಕಾವ್ಯದಲ್ಲಿ ನಿಸರ್ಗದ ರಮಣೀಯತೆ ಹಾಸುಹೊಕ್ಕಾಗಿ ಕಂಡುಬರುತ್ತದೆ. ಕವಿ ನಿಸರ್ಗ ಪ್ರೇಮಿ. ನಿಸರ್ಗದ ಸೌದರ್ಯವನ್ನು ಕವಿ ತಾನು ಉಂಡು, ಜನಸಾಮಾನ್ಯರಿಗೂ ಉಣಬಡಿಸಿದ್ದಾರೆ. ಕವಿ ತನ್ನ ಕಾವ್ಯದಲ್ಲಿ ಅವನ ತವರೂರಾದ ಗೋಕಾಕದ ನಿಸರ್ಗ ಸೌಂದರ್ಯವನ್ನು ಬಣ್ಣಿಸಿದ್ದಾರೆ. ನಿಸರ್ಗದಲ್ಲಿ ಕಂಡುಬರುವ ಋತು ಮಾಸಗಳನ್ನು ಕುರಿತು ಕವಿ ಬರೆದಿದ್ದಾನೆ.

"ವಸಂತ ವೈಭವ" ಕವನದಲ್ಲಿ ಲಕ್ಷೆಟ್ಟಿಯವರು, 'ವಸಂತ' ಕಾಲದ ಸೌಂದರ್ಯವನ್ನು ಹೀಗೆ ಕವನ ರೂಪದಲ್ಲಿ ಹಿಡಿದಿಟ್ಟಿದ್ದಾರೆ.

ಮಧುರಿಮೆಯ ಅಧಿರಾಜ ವಸಂತ ತಾ ಬಂದಿಹನು

ಕೋಗಿಲೆಯ ಎದೆ ತುಂಬಿ ಹಾಡುಹಾಡು

ಜೀವ ಜೀವಗಳಲ್ಲಿ ಹೊಸ ಭಾವ ಮೂಡುತ್ತಿದೆ

ಬಾಳಬನವರಳುತಿದೆ, ನೋಡಿ ಹಾಡು!

ನಮ್ಮ ಸಂಸ್ಕೃತಿಯ ಯಾವುದೋ ಕಾರಣಕ್ಕೆ ಮೈ ತಳೆದು ಸನಾತನತೆ ಲೇಪ ಹಚ್ಚಿಕೊಂಡಿದೆಯೆಂಬಂತೆ, ಬಂಡಾಯದವರು ಬರೆಯಬಹುದು ಆದರೆ ಮನುಷ್ಯ ಬದುಕಿನ ಮಜಲುಗಳನ್ನು ಗುರುತಿಸಿ ಅನುಭವಿಸುವ ಅನುಭವ ಭಾರತೀಯ ಬದುಕಿಗೆ ಮಾತ್ರ ಸಾಧ್ಯವೆಂಬುದನ್ನು ಸಂವೇದನಾಶೀಲತೆ ಹೊಂದಿ ಬರೆಯುವವರು ಗುರುತಿಸುವಲ್ಲಿ ಸಫಲತೆ ಕಾಣುತ್ತಾರೆ. ಮೇಲಿನ 'ವಸಂತ ವೈಭವವು' ಕೂಡ ನಿಸರ್ಗ ಸೌಂದರ್ಯದಲ್ಲಿ ಮನುಷ್ಯ ಹೇಗೆ ಪ್ರೀತಿಯನ್ನು ಅರಳಿಸಿ ಅನುಭವಿಸಬಲ್ಲನೆಂಬುದನ್ನು ದಿಟ ಮಾಡುತ್ತಾರೆ. ಬಾಳೆಂಬುದು ಒಂದು ವನ. ಅಲ್ಲಿ ಹೂವುಗಳಿವೆ, ಮುಳ್ಳುಗಳಿವೆ, ಕಾಯಿಗಳು ಹೀಚುಗಳೂ ಆಗಿವೆ, ಮೊಗ್ಗೆಯೊಡೆದ ಸುವಾಸನೆ ಅಲ್ಲಲ್ಲಿ ಬೀರುತ್ತ, ಅರಳಲಿದೆ. ಅದಕ್ಕೆ ಕೋಗಿಲೆಯು ಸವಿಗಾನದಿಂದ ಬದುಕು ಚಲನತೆಗೆ ಮುಂದಾದಾಗ, ಕಂಪು ಬೀರುವ ಸೋಂಪಾದ ತೋಟದ ವಸಂತಕಾಲದ ಕೋಗಿಲೆಯೇ ನೀ ಹಾಡಿ ಬದುಕಿಗೆ ಸಂಗೀತದ ಲಯ ನೀಡುವಂತೆ ನೋಡಿಕೋ, ಬಾಳಿನ ಬನವು ಅರಳುವ ಹಾಗೆ ಮಾಡು ಎನ್ನುವ ಅವರ ಮನದಿಚ್ಛೆ ನಮಗೆಲ್ಲ ನಮ್ಮದೇ ಆ ಹಾಡು ಎನ್ನಿಸದಿರದು.

೪.೨ <u>ಪ್ರೀತಿ-ಪ್ರೇಮ</u>

ಶ್ರೀ ಬಾಳೇಶ ಲಕ್ಷೆಟ್ಟಿಯವರು ತಮ್ಮ ನಿಜ ಜೀವನದಲ್ಲಿ ನಡೆದ ಪ್ರೀತಿ-ಪ್ರೇಮದ ಸಂಗತಿಗಳನ್ನು ಕವನ ಸಂಕಲನದಲ್ಲಿ ಸೆರೆ ಹಿಡಿದಿದ್ದಾರೆ.

ನಾನು ಬಯಸಿದ ಲಲಿತ

ಚೆಂಗುಲಾಬಿಯ ಹೂವು

ಇಂದೆನ್ನ ಕೈಬಿಟ್ಟಿತು;

ಸವಿಯ ಬಾಳಿನ ಬೆನ್ನು

ಹೃದಯ ತುಂಬಿ ಹೊನ್ನು

ಸಿರಿಗೆ ಮಾರುಹೋಯ್ತು!-

---

೨೧. ಕಾವ್ಯ ಚಿಂತನ - ಶ್ರೀಕಾಂತ ಶಾನವಾಡ ಪು.೩೯

೨೨. ವೀಣೆ (ಬಾ.ಲ.ಸಂ.)ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೯೪

೨೩. ನಿರಂತರ (ಬಾ.ಲ.ಕಾವ್ಯ ಸಂಪುಟ) ಸಂ. ಡಾ.ಎಚ್.ಆಯ್.ತಿಮ್ಮಾಪೂರ ಪು.೭೫

ನನ್ನ ಪ್ರೀತಿಯ ತಂಗಿ ಇಂತು ನುಡಿದಳು

ಅಣ್ಣ ಲಲಿತೆಗೆ ಮದುವೆ

ಧಾರವಾಡದ ಧನಿಕ ಕುಳಿತಿಹನು

ಹಾಯಾಗಿ ಕೈ ಹಿಡಿಯಲು

. . . . . . . . . . . . . .

ಪರವಧುವ ನಾನೊಲ್ಲೆ . . . .

. . . . . . . . . . . . . . . .

ಇದೆ ನನ್ನ ಹಾರೈಕೆ ಹಿರಿ ಬಯಕೆ ತಂಗಿ

ತಾನು ಪ್ರೀತಿಸಿದವಳು, ಇನ್ನೊಬ್ಬರ ಸಂಗಾತಿಯಾಗಿ ಹೋಗುವಾಗಿನ ತಳಮಳ, ಸಂಕಟಗಳು, ಆ ಸುದ್ದಿ ತನ್ನ ತಂಗಿಯಿಂದ ತಿಳಿದಾಗ, ಮನಸ್ಸನ್ನು ನಿಯಂತ್ರಿಸಿಕೊಳ್ಳುವ ಪ್ರಬುದ್ಧತೆ ಅವಳಿಗೆ ಸಿಗುವ ವರ ಒಳ್ಳೆಯವನಾಗಿರಲಿ, ಅವಳ ಬಾಳು ಬಂಗಾರವಾಗಲಿ, ಹಾಗೆಯೇ ಪರರ ಸತಿಯನ್ನು ನಾ ಒಲ್ಲೆ, ಅವಳು ಐಶ್ವರ್ಯವಂತಳಾಗಿ ಸೊಗಸಾಗಿ ಬಾಳಲಿ ಎಂಬ ಹಾರೈಕೆಯನ್ನು ತಂಗಿಯ ಎದುರು ಹೇಳುತ್ತಾ ಅದೇ ನನ್ನದಾದ ಹಿರಿ ಬಯಕೆ.

ಈ ಪ್ರಪಂಚದ ಉಸಿರಿರುವುದೇ 'ಪ್ರೀತಿ' ಎಂಬ ಎರಡಕ್ಷರಗಳಲ್ಲಿ ಜಿ ಎಸ್ ಎಸ್ ಹೇಳುವಂತೆ ಪ್ರೀತಿ ಇಲ್ಲದ ಮೇಲೆ; ಹೂವು ಅರಳೀತು ಹೇಗೆ ಮೋಡ ಕಟ್ಟೀತು ಹೇಗೆ ಹಣಿಯೊಡೆದು ನೆಲಕ್ಕೆ ಬಿದ್ದಿತ್ತು ಹೇಗೆ ಹುಲ್ಲು ಚಿಗುರೀತು ಹೇಗೆ" ಹೌದು 'ಪ್ರೀತಿ' ಎಂಬುದು ವಿಶ್ವ ತತ್ವ ಅದಿಲ್ಲದಿದ್ದರೇ, ಈ ಜಗವೇ ಇರುವುದಿಲ್ಲ. ಅಂಥ ಉತ್ಕಟ ಪ್ರೀತಿ ಹೆಣ್ಣು-ಗಂಡಿನ ನಡುವೆ ಅಂಕುರವಾಗುವುದು ಸ್ವಾಭಾವಿಕ.

ಬಾಲೆ ನಿನ್ನ ಬಾಳಿನಲ್ಲಿ

ನಾನು ಅಡ್ಡ ಬಾರೆನು

ಹಾಲಿನಂಥ ಹೃದಯದಲ್ಲಿ

ಹುಳಿಯನೆಂದು ಹಿಂಡೆನು

'ಪ್ರೀತಿಗೆ' ಸಾವಿಲ್ಲ. ಅದಕ್ಕೆ ತೆರುವ ಬೆಲೆಗೂ ಮೌಲ್ಯ ಕಟ್ಟಲು ಸಾಧ್ಯವಿಲ್ಲ. ಯಾಕೆಂದರೆ, ಯಾರು ಪ್ರೀತಿಯ ತೆಕ್ಕೆಗೆ ಬೀಳುವರೋ, ಅವರು, ತ್ಯಾಗಕ್ಕೆ ಅಣಿಯಾದಂತೆ. ಅದಕ್ಕಾಗಿ ಹೃದಯವಿಲ್ಲಿ 'ಹಾಲಿನ' ರೂಪಕ ಪಡೆದದ್ದು, ಅದರೊಳಗೆ ಕಲ್ಮಶದ ಭಾವಗಳು ಇಲ್ಲಿ

ಹುಳಿಯಾಗಿ ಹೊರಬಂದಿವೆ. ನಾವು ತಿಂದು ಅನುಭವಿಸುವ ವಸ್ತುಗಳು, ಬದುಕಿಗೆ ಈ ದೇಹವನ್ನು ಬೆಳೆಸದೇ, ಬದುಕಲು ಬೇಕಿರುವ ಮನಸ್ಸನ್ನು ಕಟ್ಟಬಲ್ಲವು.

ನಮ್ಮ ಭಾರತೀಯ ಸಂಸ್ಕೃತಿಯ ಹೆಗ್ಗಳಿಕೆಗೆ ಇರುವುದೇ, ಅನ್ಯೋನ್ಯವಾದ ಸಂಬಂಧಗಳಲ್ಲಿ. ಅವುಗಳನ್ನು ಹೆಣೆದುಕೊಂಡಿರುವ ಬಂಧನಗಳ ಭಾವದಲ್ಲಿ ನಮ್ಮ ಪ್ರೇಮಕ್ಕೆ ಪೂಜ್ಯತೆ ಇದ್ದಷ್ಟೇ, ಕಾಮಕ್ಕೆ ವಿರೋಧವಿದೆ. ಒಂದು ವಯದವರು, ಅಣ್ಣ-ತಂಗಿಯರಾಗಿ, ಸಂಬಂಧ ಬೆಳೆಸಲು ನಮ್ಮ ವ್ಯವಸ್ಥೆಯಲ್ಲಿ ಅವಕಾಶವಿದೆ. ಆದರೆ ಆ ಅವಕಾಶ ನೀಡಿದ ಸಮಾಜದಲ್ಲಿಯೇ ಅಂತಹ ಬಂಧಗಳನ್ನು ಅಪಾರ್ಥ ಕಲ್ಪಿಸಿ, ಸುಮಧುರ ಬಾಂಧವ್ಯಕ್ಕೆ ಕಿಚ್ಚು ಹಚ್ಚುವ ಕೆಲಸವನ್ನು ಮಾಡುತ್ತಾರೆ. ಇಂತಹ ಸಂಘರ್ಷಾತ್ಮಕ, ವಿಷಯವನ್ನು ಭಾವತುಂಬಿ ಹಾಡುವಂತೆ ಗೀತೆಯಾಗಿ (ಕಾವ್ಯ) ಕಟ್ಟಿ ಕೊಟ್ಟಿರುವ ಲಕ್ಷ್ಮೀಟ್ಟಿಯವರ ಕವಿ ಮನಕ್ಕೆ ಹೆಚ್ಚಿನ ಅಂಕಗಳು ಸಿಗಲೇಬೇಕು.

ನಾನು ಅಳಿವೆ ನೀನು ಅಳಿವೆ
ಉಳಿವುದೊಂದೆ ಸ್ಮರಣೆಯು
ಅದರ ಕಣಕಣವು ಕೂಡ
ಸ್ಮರಣೆಯೊಳಕಿಳಿವುದು

ನಾವೆಲ್ಲ, ಉಳಿದಿರುವುದು ಅಳಿಯಲೆಂದೆ. ಅಳಿಯುವುದು ಶತಸಿದ್ದವಾದಾಗ ಅಲ್ಲದ ಮಾತುಗಳಿಗೇಕೆ ಅಂಜಿಕೆ. ನಾವು ನಾವಾಗಿದ್ದರೇ ಸಾಕು. ಬದುಕು ಅರ್ಥಪೂರ್ಣ, ಅಂದಕೆಡದ, ಚಂದನಗೊಂಬೆ ಯಂತಾಗುವುದೆಂದು ಹೇಳುವ ಕವನ, ನಮ್ಮೊಳಗಿನ ಭಾವಕ್ಕೆ ಬೆರಗು ಮೂಡಿಸುತ್ತದೆ.

'ಸಂಪಿಗೆಯ ಬೆನ್ನು ಹತ್ತಿ' ಇದೊಂದು ಸುದೀರ್ಘ ಕವನ. ಇದು ವಿಭಿನ್ನವಾಗಿ ಮೂಡಿ ಬಂದಿದೆ. ಪ್ರೇಮದ ಶಿಖರವನ್ನೇರುವ ಮತ್ತೊಂದು ಮೆಟ್ಟಿಲು ಈ ಕವನ.

ಗಂಡು-ಹೆಣ್ಣಿನಲ್ಲು ಪ್ರೇಮಾಂಕುರ, ಅವರ ಮದುವೆಗೆ ಮುಂದುವರೆದಾಗ, ಎಷ್ಟೋ ಸಾರಿ ಬಹಳಷ್ಟು ಪ್ರೇಮಿಗಳು ನಿರಾಶೆಯಲ್ಲಿ ಕೊಚ್ಚಿಹೋಗುತ್ತಾರೆ. ಕಾರಣ ಈ ಸಮಾಜದ ಅನಿಷ್ಟಗಳಾದ ಜಾತಿ-ಮತ, ಅಧಿಕಾರ-ಅಂತಸ್ತು, ಮೇಲು-ಕೀಳು ಮುಂತಾದ ಕ್ಷುದ್ರ ಸಂಗತಿಗಳು. ಇಂತಹ ಅನಿಷ್ಟ ಪದ್ಧತಿಯಿಂದ ಸಮಾಜದಲ್ಲಿ ಪ್ರೇಮಿಗಳು ಅಗಲುವ ಸ್ಥಿತಿ ಒದಗಿದೆ. ಪ್ರೇಮಿಗಳು ದಿಕ್ಕು

---

೨೪. ಕಾವ್ಯ ಚಿಂತನ – ಶ್ರೀಕಾಂತ ಕಾನವಾಡ ಪು.೧೦, ೧೧, ೧೨
– ಅದೆ – ೫೪, ೬೩

ತೋರದೆ, ರೆಕ್ಕೆ ಮುರಿದ ಹಕ್ಕಿಗಳಾಗಿ ಬಿಕ್ಕುವ ಸ್ಥಿತಿಯನ್ನು ಲಕ್ಷೆಟ್ಟಿಯವರು ತಮ್ಮ ಕಾವ್ಯಕ್ಕೆ ವಸ್ತುವನ್ನಾಗಿ ಎತ್ತಿಕೊಂಡು ವಿವೇಚನಾತ್ಮಕವಾಗಿ ಕೆತ್ತಿದ್ದಾರೆ.

೪.೩. ದಾಂಪತ್ಯ

ಶ್ರೀ ಬಾಳೇಶ ಲಕ್ಷೆಟ್ಟಿಯವರು ತಮ್ಮ ಕವನ ಸಂಕಲನಗಳಲ್ಲಿ ದಾಂಪತ್ಯ ಜೀವನದ ಬೆಸುಗೆಯನ್ನು ವರ್ಣಿಸಿದ್ದಾರೆ. ಗಂಡು–ಹೆಣ್ಣಿನ ನಡುವೆ ಪ್ರೀತಿ–ಪ್ರೇಮ ತುಂಬಿರಬೇಕು ಹೊರತು ಅಂತಸ್ತು, ಹಣ, ಅಧಿಕಾರದ ಆಸೆ ತುಂಬಿರಬಾರದೆನ್ನುತ್ತಾರೆ. ಲಕ್ಷೆಟ್ಟಿಯವರು ದಾಂಪತ್ಯ ಜನ್ಮಜನ್ಮದ ಅನುಬಂಧ, ಇಂತಹ ಅನುಬಂಧವನ್ನು ಬಂಧವಾಗಿರಿಸಿಕೊಂಡು ನೆಮ್ಮದಿ ಜೀವನ ನಡೆಸುವುದು ಹೇಗೆ ಎಂಬುದನ್ನು ವಿವರಿಸಿದ್ದಾರೆ.

'ಬಾಳಗೆಳತಿ' ಗೆ 'ಬಾನಲ್ಲೆ' ಹಾರೈಕೆ ಹೊಸಬೆಳಕು, ಸಂಪಿಗೆಯ ಬೆನ್ನುಹತ್ತಿ ನಿರಾಶೆಯ ಕೂಪದಿಂದ ಮುಂತಾದವುಗಳು ಪ್ರೇಮ ವಿರಹ ಗೀತೆಗಳು. ಇಲ್ಲಿ ಹದಿವಯದ ಉಗುರು ಬೆಚ್ಚಗಿನ ಮನಸ್ಸಿನ ವೈವಿಧ್ಯಮಯ ಮುಖಗಳನ್ನಿಲ್ಲಿ ಕಾಣುತ್ತೇವೆ.

ಬರಲಿಹ ಭಾಗ್ಯದ ದಿನಗಳ ಚಿತ್ರವು
ಹೂವಿನೊಳಡಗಿಹುದು
ನಾಳಿನ ನಾಡಿನ ಜೀವನವೆಲ್ಲವು
ನಮ್ಮನೆ ಕೂಡಿಹುದು (ಬಾಳಗೆಳತಿಗೆ)

ಇಲ್ಲಿಯ ಕಾವ್ಯನಾಯಕ ತನ್ನ ಪ್ರಿಯತಮೆಯನ್ನು ಉದ್ದೇಶಿಸಿ ಹೇಳುತ್ತಿರುವ ಮಾತಿನಲ್ಲಿ ಭಾವಿ ಭವಿತವ್ಯದ ಬಗ್ಗೆ ಭಾರಿ ಭರವಸೆಯನ್ನಿಟ್ಟುಕೊಂಡಿರುವುದು ಸ್ಪಷ್ಟವಾಗಿ ಕಂಡುಬರುತ್ತೆ. ಮುಂದೆ ಬರಲಿರುವ ದಿನಗಳು ಖಂಡಿತವಾಗಿಯೂ ತಮ್ಮ ಅದೃಷ್ಟವನ್ನು ಖುಲಾಯಿಸುವಂಥವುಗಳು. "ಎಳಲೆ ಚನ್ನಿ", ಚಲುವಿನ ಕಣ್ಣೆ/ಚಿಂತೆಯ ತೊರದೇಳು/ಅಳಲನ್ನಳಿಸಲು ಮಲ್ಲಿಗೆಯರಳಿದೆ/ರಮಣೀಯ ಹಾಡೇಳು/ ಎಂದು ಹುರುದುಂಬಿಸುತ್ತಿದ್ದಾರೆ.

ನಮ್ಮ ಬಾಳಿಗೆ ಸುಖದ ಸುಗ್ಗಿ ಬರಬೇಕಾದರೆ, "ನಿನ್ನಯ ಹೃದಯವು ನನ್ನೊಳು ಬೆರೆತರೆ" ಎನ್ನುವಲ್ಲಿ ಕಾವ್ಯ ನಾಯಕನ ವ್ಯಕ್ತಿತ್ವ ಅನಾವರಣವಾಗಿದೆ. ಆತ ತನ್ನವಳಿಂದ ಬಯಸುತ್ತಿರುವುದು ದುಡ್ಡು, ಆಸ್ತಿ, ಅಂತಸ್ತು, ಅಧಿಕಾರ, ನೌಕರಿ, ಚಾಕರಿ ಇತ್ಯಾದಿಗಳಲ್ಲ. ಅವಳ ಹೃದಯ ಪವಿತ್ರ ಪ್ರೇಮಕ್ಕಿರುವ ಬೆಲೆಯನ್ನಿಲ್ಲಿ ಕಾಣಬಹುದಾಗಿದೆ. ಗಗನವು ತಿಳಿಯಿತು ಬಾಬಾನಲೆಯೊಳು ಎಂದು ಆಮಂತ್ರಿಸುತ್ತಿರುವುದು ಅರ್ಥಪೂರ್ಣವಾಗಿದೆ.

ನಲ್ಮೆಯ ನಲ್ಮೆಯ ನೋಟವು 'ರಸದೂಟ' ಅವಳೊಂದಿಗೆ ಆಡುವ ಹುಡುಗಾಟಿಕೆಯು 'ಸೊಗದಕೂಟ' ನಲ್ಲೆ ಬಳಿಯಲ್ಲಿರುವುದು ದಿನಂಪ್ರತಿ ಹಬ್ಬ ಅವಳಾಡುವ ಒಂದೊಂದು ಮಾತುಗಳು ಜೇನ ಹನಿಗಳು. ಅವಳ ರೂಪ ಉಷೆಯ ಹಾಗೆ ನಲ್ಲಗದುವೆ ದಾರಿದೀಪ. ಹೀಗೆ ಆಟ–ನೋಟ–ಒಡನಾಟ, ಮಾತು–ಮೌನ ಮುಂತಾದವುಗಳು 'ಬಾ ನಲ್ಲೆ' ಎನ್ನುವ ಕವನದಲ್ಲಿ ಆಕರ್ಷಕವಾಗಿ ಮೂಡಿಬಂದಿದೆ.

ಮದುವೆ ವಿಚಾರ ಕುರಿತು ಲಕ್ಷೆಟ್ಟಿಯವರು ಹೊಸ ತೆರನಾಗಿ ಹೇಳುತ್ತಾರೆ.

"ಗಂಡು ಹೆಣ್ಣುಗಳು ಮದುವೆಯಾಗುವವು ನಿತ್ಯ
ಅಜ್ಞಾನದಿಂದ ಕೆಲವರು ಸುಜ್ಞಾನದಿಂದ ಕೆಲವರು

ರೊಕ್ಕದಾಸೆಯಿಂದ ಹಲವರು ಮದುವೆಯಾಗುವರು ಇದು ಸತ್ಯ" ಇಂತಹ ಮದುವೆಗಳು ಮದುವೆಯೇ ಅಲ್ಲವೆಂದು ತೀರ್ಪುಕೊಟ್ಟು ಪ್ರೀತಿಸಿ, ಪ್ರೀತಿಸಿದವರನ್ನೇ ಲಗ್ನವಾಗುವುದು ನಿಜವಾದ ಮದುವೆಯೆಂದು ಹೇಳುತ್ತಾರೆ. ಒಲುಮೆಯಿಲ್ಲದ ಮದುವೆ ಮದುವೆಯೆ? ಎಂದು ಪ್ರಶ್ನಿಸುತ್ತಾರೆ.

೪.೪ <u>ಸಾಮಾಜಿಕ</u>

ಬಾಳೇಶ ಲಕ್ಷೆಟ್ಟಿಯವರು ತಮ್ಮ ಕವನ ಸಂಕಲನದಲ್ಲಿ ಸಾಮಾಜಿಕ ನೆಲೆ ಕುರಿತು ಸ್ಪಷ್ಟ ಚಿತ್ರಣ ಮೂಡಿಸಿದ್ದಾರೆ. ತಮ್ಮ ಜೀವನದಲ್ಲಿ ಉಂಡ ನೋವು ನಲಿವು, ಸುಖ–ದು:ಖ, ಬಡತನ–ಸಿರಿತನ ಮುಂತಾದ ಸಾಮಾಜಿಕ ದಾರಿದ್ರ್ಯವನ್ನು ಕುರಿತು ಕವಿ ವಿವರಿಸಿದ್ದಾನೆ. ಭಾರತಾಂಬೆಯ ಮಕ್ಕಳಾದ ನಾವು ಬಡತನದ ಬೆಂಗಾವಲಿನಲ್ಲಿ ಬೆಂದು ನೊಂದಿದ್ದೇವೆ ಎನ್ನುತ್ತಾರೆ ಕವಿ. ಈ ನಾಡಿನಲ್ಲಿ ಹಸಿದ ಜೀವಿಗಳಿಗೇನೂ ಕೊರತೆಯಿಲ್ಲ. ಅವರು ನಮ್ಮವರಾಗಿಯೂ, ಪರರಾಗಿದ್ದಾರೆ. ಅವರ ಹಸಿವನ್ನು ಹಿಂಗಿಸಲು ಇಲ್ಲಿಯವರೆಗೂ ಆದ ಕೆಲಸಗಳೇನು? ಎಂದು ತಿಳಿಸಿಹೇಳಲು ಒಂದು ಯತ್ನ ಕೈಮಾಡಿ ಕರೆಯುತ್ತಿದೆ ನಾಡಿನಂತ:ಕರಣ! ಎಂಬ ಕವನದಲ್ಲಿ ಮೂಡಿಬಂದಿದೆ.

---

೨೫. ವೀಣೆ – (ಬಾ.ಲ.ಅ.) ಸಂ.ಎಚ್.ಆಯ್.ತಿಮ್ಮಾಪೂರ ಪು.೬೬,೬೪
೨೬. ಕಾವ್ಯ ಚಿಂತನ– ಶ್ರೀಕಾಂತ ಕಾನವಾಡ – ೯, ೧೦, ೧೧,
– ಅದೇ – ೩೪, ೩೬

ಅನ್ನ – ಅನ್ನ – ಅನ್ನ -------

ಕರುಳ ಹಿಂಡುವ ಮರ್ಮಭೇದಕ ಕೂಗು

ಹಾ ರಾಮ । ಹಾ ರಾಮ ॥

ಸಾಸಿರ ಸಾಸಿರ ದೀನದರಿದ್ರರ ಹೊಟ್ಟೆಕಿಚ್ಚು

ಬಾನುಬುವಿಗಳಂತರವನಳೆಯುತಿದೆ.

ಅನ್ನ – ಅನ್ನ – ಅನ್ನ – -- -

ಹೃದಯದಾಳದಿಂದ ಹೊರಬರುವ

ಶಬ್ಧ ಬ್ರಹ್ಮಗೂ ಇಲ್ಲವೊ ಕಣ್ಣು !!

ಹೀಗೆ ಸಾಗುವ ಕರುಳಿನ ಕೊನೆಯುನ್ನು ಮುಟ್ಟುವ, ಪ್ರಯತ್ನ ಇಲ್ಲಿರುವ ಸಾವಿರ ಸಾವಿರ ಬಡವರ ಹಸಿವು, ಆಕಾಶ–ಭೂಮಿಯ ನಡುವಿನಂತೆ ಅಂತರ ಹೊಂದಿದೆಯನ್ನುತ್ತಾರೆ. ಶ್ರೀಮಂತರೆಂಬುವರು, ತಿಂದು ತೇಗುತ್ತ, ಊಟ ಮಾಡದೆ ಕೆಡಿಸುವ ಅನ್ನಕ್ಕೆ ಕೊನೆಯಿಲ್ಲ. ಒಂದುಕಡೆ ತಿನ್ನದೆ ಕೇಡಾಗುವ ಅನ್ನ ಹೊಟ್ಟೆ ತುಂಬಿದವರ ಡೊಂಬರಾಟ, ಮತ್ತೊಂದು ಕಡೆ ತಿನ್ನಲಿಕ್ಕೆ ಸಿಗದೆ, ಮೈ, ಕೈಗಳನ್ನೇ ನೆಕ್ಕುವ ಸ್ಥಿತಿ.

ಎನ್ನಯ ನೀರಸ ಬಾಳಿನ ಬಾನೊಳು

ಹೊಳಪಿನ ತಾರೆಯು ಮಿಣುಗುತಿದೆ

ತಾರೆಯ ಪಾವನ ದೀಪ್ತಿಯ ಪ್ರಭೆಯೊಳು

ಹೃದಯದ ದೀವಿಗೆ ಬೆಳಗುತ್ತಿದೆ.

ಜೀವನವೆಂಬುದು ಯಾವತ್ತೂ ದು:ಖದತ್ತಲೇ ಮುಖಮಾಡಿ ಚಲಿಸುತ್ತಲಿರುತ್ತದೆ. ಅಲ್ಲಿ ನೋವು, ಹೆಚ್ಚಾದಾಗ ಅಸಹಾಯಕತೆ ಎದ್ದು ಕುಳಿತುಕೊಳ್ಳತ್ತದೆ. ಆಗ ಅದು ನೀರಸವಾಗಿಬಿಡುತ್ತದೆ. ಅಲ್ಲಿ ಹೊಳೆವ ತಾರೆ, ನಕ್ಷತ್ರಗಳಂತೆ ಸುಖವು ಗೋಚರಿಸುತ್ತ, ಹೃದಯ ದೀವಿಗೆ ವಿಶಾಲವಾಗಿ ಹರಡಿಕೊಂಡು ಬದುಕಿಗೆ ಸೌಂದರ್ಯದ ಸಿಂಚನ ಮಾಡುತ್ತದೆ.

'ನೋವು–ನಲಿವು' ಎಂಬ ಕವನ ಎಷ್ಟೊಂದು ಮಧುರವಾದ ಸ್ಪರ್ಶ ಮಾಡುತ್ತದೆ ನೋಡಿ.

---

೨೭ ಕಾವ್ಯ ಚಿಂತನ– ಶ್ರೀಕಾಂತ ಕಾನವಾಡ ಪು. ೧೯

ಅದಾವ ಪೂರ್ವದ ಪುಣ್ಯದ ಫಲವೊ
ಮಹಾದೇವನ ಶ್ರೀ ಕಾರುಣ್ಯವೊ
ಬಯಕೆ ಬಳ್ಳಿಗೆ ಹಸಿರು ಮೂಡಲೆಂದು
ಹಾಲು ಹಳ್ಳ ಹರಿಯುತಿಹ
ಬಾಳ ಹಂದರದಲ್ಲಿ ಸಂಪ್ರೀತಿ
ಸಂಪಿಗೆಯು ಅರಳಿತಿಂದು.

ನಿತ್ಯದ ಬದುಕು ನದಿಯ ನೀರಿನಂತೆ ಕಲರವ ಮಾಡುತ್ತಾ, ಮಂಜುಳ ನಿನಾದದ ಸೋಂಪಾದ ಧ್ವನಿಯ ಕೇಳಿಸುತ್ತ, ನಿರಂತರವಾಗಿ ಹರಿಯುತ್ತಿರುತ್ತದೆ. ಜೀವನದಲ್ಲಿ ಬಯಸಿದ್ದು ಸಿಕ್ಕಾಗ, ಅದು ದೇವನ ಆಶೀರ್ವಾದವಾಗುತ್ತದೆ. ನಮ್ಮ ಬಯಕೆ, ಬೇಡಿಕೆಗಳೆಂಬ ಬಳ್ಳಿ ಹಸಿರುಗೊಂಡು, ಹಾಲಿನ ಹಳ್ಳವೇ ಹರಿದಷ್ಟು ಸಂತಸ, ಆನಂದಗಳು ಮನದಲ್ಲಿ ಬುಗ್ಗೆಗಳಾಗಿ ಪುಟಿಯುತ್ತವೆ. ಈ ಬಾಳೆಂಬ ಹಂದರದಲ್ಲಿ ಸರ್ವರೊಂದಿಗಿನ ಪ್ರೀತಿ, ಸುಖ ತರುವ ಪ್ರೀತಿಯು ಸಂಪಿಗೆ ಹೂ ಸುಗಂಧ ವಾಸನೆಯನ್ನು ಈ ಜಗಕ್ಕೆ ಬಿತ್ತರಿಸುತ್ತ ವಾತಾವರಣವನ್ನೆಲ್ಲ ಸುವಾಸನೆ ಭರಿತನ್ನಾಗಿ ಮಾಡುತ್ತ ಅರಳಿದಂತೆ, ಎಂಬುದು ಇಲ್ಲಿಯ ಭಾವ.

ಪ್ರಸ್ತುತ ಬದುಕನ್ನು ಅನಾವರಣ ಮಾಡುವ ಒಂದು ಪ್ರಯತ್ನ ಲಕ್ಷ್ಮೆಟ್ಟಿಯವರ ಕವನದಲ್ಲಿ ಕಾಣಸಿಗುತ್ತದೆ. "ಕೊಡಿ ಸ್ವಾಮೀ, ಕೊಡಿ" ಎಂಬ ಕವನ ಮಾನವ ಮರೆತು ಬಿಟ್ಟಿರುವ ಮಾನವೀಯತೆಯನ್ನು ಹಂಚಿ ಅನುಭವಿಸಲು ಕೇಳುತ್ತಾರೆ ಆಸ್ತಿ, ಹಣ, ಅಂತಸ್ತು, ಗೌರವ ಅಧಿಕಾರ ಎಲ್ಲವನ್ನು ತಮ್ಮ ನೇರಕ್ಕೆ ಅಳೆದು ತೂಗುತ್ತಾರೆ ಪ್ರೀತಿ, ಪ್ರೇಮ. ಸ್ಪಂದನ, ಮರುಗುವಿಕೆ ಕರಗುವಿಕೆ, ಸಾಂತ್ವನ ಇಂತಹ ಎಲ್ಲ ರೀತಿಯ ಮಾನವಿಯತೆ ಮರೆಸುವ ಪದ ಹಾಗೂ ಸಂಬಂಧಗಳ ಆಪ್ತತೆಯನ್ನು ದೂರ ಸರಿಸಿ ಅವುಗಳೆಲ್ಲದರ ಜಾಗದಲ್ಲಿ, ವ್ಯಾಪಾರ ಭಾವನೆ, ಗಳಿಕೆಯ ವಿವೇಚನೆ, ಅಧಿಕಾರ ಹಿಡಿಯುವ ದುರ್ಬುದ್ಧಿ, ಸ್ವಾರ್ಥದ ಅರಮನೆ ಕಟ್ಟುವ ಬಯಕೆಗಳೇ ಥಾಳಾಗಿ ಕಾಣಸಿಗುತ್ತವೆ. ನಿತ್ಯ ಬದುಕನ್ನು ಬದುಕಿಸಲು ಬೇಕಾಗುವ ಮಾನವೀಯತೆಯನ್ನು ಒಂದು ಹಿಡಿಯಷ್ಟು, ನಿಮ್ಮೆದೆಯೊಳಗಿದ್ದರೇ ಕೊಡಿ ಸ್ವಾಮಿ, ಎಂದು ಕೇಳುತ್ತಾರೆ ಹೀಗೆ – –

---

೨೮. ವೀಣೆ – (ಬಾ.ಲ.ಅ.) ಸಂ.ಎಚ್.ಆಯ್.ತಿಮ್ಮಾಪೂರ ಪು.೮೬,೮೭
೨೯. ಕಾವ್ಯ ಚಿಂತನ – ಶ್ರೀಕಾಂತ ಕಾನವಾಡ ಪು. ೧೬,೧೯.೩೧.೩೩.
ಅದೇ – ೩೭ ೪೩.೫೧, ೬೪, ೬೫.
೩೦. ನಿರಂತರ (ಬಾ.ಲ.ಕಾವ್ಯ ಸಂಪುಟ) ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು. ೬೭

ಕೊಡಿ ಸ್ವಾಮಿ, ನಿಮ್ಮ ಎದೆಯೊಳಗೇನಾದರೂ

ಹಿಡಿ ಮಾನವೀಯತೆ ಇದ್ದರೆ

ಧಾರೆಯರೆದು ಕೊಡಿ,

ನೀವು ದೊಡ್ಡವರು ಸ್ವಾಮಿ,

ನಿಜಕು ದೊಡ್ಡವರು

ಮೇಲಾಗಿ ಚಕ್ರಧರರು!

ದೊಡ್ಡವರದೆಲ್ಲವೂ ದೊಡ್ಡದೆಂಬುವ ಮಾತು ಸುಳ್ಳಲ್ಲ.

ಹೀಗೆ ಹೇಳುತ್ತ "ಸತ್ಯವಾನ ಸಾಯುವನೆ" ಎಂಬ ವಿಚಿತ್ರವೆನ್ನಿಸಿದರೂ ಸತ್ಯವಾದ ಮಾತನ್ನು ಕವನದ ಮೂಲಕ ಹೇಳುವ ಆ ಪರಿಯಿದೆಯಲ್ಲ ಒಂದು ವಿಶಿಷ್ಟ ಚಿಂತನೆಗಳೆಯುವ ವಿಚಾರವಾಗಿ ರೂಪು ಪಡೆದುಕೊಳ್ಳುತ್ತದೆ. ಹೆಸರೇ 'ಸತ್ಯವಾನ' ಅಂದರೆ, ರೂಪಕದಲ್ಲಿರುವ ವ್ಯಕ್ತಿ ಸಾಯಬಲ್ಲನು? ಆದರೆ ಇವರ ಪ್ರಶ್ನೆ ಸತ್ಯವಾನ (ಸತ್ಯ-ದೇವರು) ಸಾಯುವವನೆ? ಅವನೇ ಸಾಯವುದಾದರೆ ಈ ಜಗಕ್ಕೆಲ್ಲಿ ಬೆಲೆಯಿದೆ ಅಂದರೆ, ಮೌಲ್ಯಗಳು, ನಂಬಿಕೆ, ವಿಶ್ವಾಸಗಳೇ ಅಲ್ಲದೆ, ಪ್ರೀತಿ, ವಾತ್ಸಲ್ಯ, ಮಮತೆಗಳೂ ಕೂಡ ಸತ್ಯದ ಅಂಶಗಳೇ ಅವು ಎಂದಾದರೂ ಇಲ್ಲವೆಂದಾದಾಗ, ಸತ್ಯ ಸತ್ತಂತೆಯೇ ಸರಿ ಎಂದು, ಕೇಳಿದ್ದಾರೆ.

೪.೫ <u>ಮಾತೃಭೂಮಿ</u>

೧೯೫೭ರಲ್ಲಿ ರಚನೆಗೊಂಡ ಲಕ್ಷೆಟ್ಟಿಯವರ 'ಭಾಗ್ಯೋದಯ' ಎಂಬ ಕವನ, ಅಂದಿನ ಸಮಯ, ಸಂದರ್ಭ, ಸ್ಥಿತಿಗಳನ್ನು ಚನ್ನಾಗಿ ಅಳವಡಿಸಿಕೊಂಡಿದ್ದ ಸಾಂದರ್ಭಿಕ ಕವನವಾಗಿ ಮೂಡಿಬಂದಿದೆ. ಅದು, ಸಮಗ್ರ ಕನ್ನಡ ನಾಡು ಏಕೀಕರಣಗೊಂಡು ಒಂದು ವರ್ಷವಾಗಿತ್ತು. ಅಂದರೆ ೧೯೫೬. ಆ ಸಂದರ್ಭವನ್ನು ಇವರು ಚನ್ನಾಗಿ ತಮ್ಮದೇ ಧಾಟಿಯಲ್ಲಿ ಕವನ ರೂಪದಲ್ಲಿ ಹಿಡಿದಿಟ್ಟಿದ್ದಾರೆ.

"ಉದಯವಾಗಿದೆ ನಮ್ಮ ಚೆಲುವ ಕನ್ನಡ ನಾಡು

ಹೊಸತು ಹೆಸರನು ಹೊತ್ತ ಮೈಸಿರಿಯ ಹಿರಿನಾಡು

ಭಾರತಾಂಬೆಯ ಮನೆಯ

ದೀಪ ಕನ್ನಡ ನಾಡು

ಅವಳ ಹಿರಿಮೆಯ ಜಗಕೆ

ಸಾರಿ ಹೇಳುವ ಹಾಡು

ಉದಯವಾಗಿದೆ"

"ಕರ್ನಾಟಕ" ಅಥವಾ ಕನ್ನಡ ನಾಡು, ಇದು ಭಾರತ ದೇಶವೆಂಬ ಒಂದೇ ಮನೆಯಲ್ಲಿ ಬೆಳಗುವ ದೀಪವೆಂದು, ಅಭಿಮಾನ, ಪ್ರೇಮ, ಉತ್ಕಟ ಭಾವಗಳಿಂದ ರಚನೆಯಾಗಿದ್ದು, ಇಂದಿನ 'ಗಡಿ' ಸಮಸ್ಯೆಯ ಸಂದರ್ಭದಲ್ಲಿ ಒಂದು ಒಳ್ಳೆಯ ನಾಡಗೀತೆಯಾಗಿ, ಮತ್ತೆ ಕನ್ನಡ ನಾಡು ಕಟ್ಟುವ ಪ್ರಕ್ರಿಯೆಯನ್ನು ಆರಂಭಿಸುವ ಮಾತಾಗಿದೆ. ಹೀಗೇ ಹುಯಿಲಗೋಳ ನಾರಾಯಣರಾವರನ್ನು ನೆನಪಿಸುವ, ಆಲೂರು ವೆಂಕಟರಾವ್ ಅವರನ್ನು ಸ್ಮರಿಸುವ ಕೆಲಸ ಈ ಕವನ ಮಾಡುತ್ತದೆ.

ಈ ಕವನದ ಹಿಂದೆಯೇ ರಚನೆಯಾಗಿರುವ 'ಕೋರಿಕೆ' ಎಂಬ ಕವನ, ನಾಡಗೀತೆಯಾಗುವ, ನಾಡಿನ ಪ್ರೇಮ, ಭಕ್ತಿ ಗೀತೆಯಾಗುವ ಅರ್ಹತೆ ಹೊಂದಿದೆ, ನಾಡು, ನುಡಿ, ಬೆಳಗಿ, ಧ್ವಜಗಳು ಹಾರಿ, ನಮ್ಮೊಳಗಿನ ಜಾತಿ–ಮತದ ದ್ವೇಷವು ಅಳಿದು ಹೋಗಿ, ನ್ಯಾಯ, ನೀತಿ ಉಳಿದು ಬೆಳೆಯಲಿ, ಅದರೊಂದಿಗೆ ಈ ನಾಡಿನ ಬದುಕು, ಮಾದರಿಯಾಗಿ ಬೆಳಗಲಿ ಎಂಬ ಹಾರೈಕೆ ಮನದಾಳದ ಮಾತಾಗಿ ಮೂಡಿಬಂದಿದೆ. ನಾಡು, ದೇಶ, ಭಾಷೆಯ ಪ್ರೇಮದೊಂದಿಗೆ, ಸ್ವಾತಂತ್ರ್ಯದ ಅಭಿಮಾನ ಕೆರಳಿಸುವ, ಅದಕ್ಕಾಗಿ ತ್ಯಾಗದ ಬೆಲೆಯನ್ನು ಯಾವ ಅಳಕು ಇಲ್ಲದೆ ಪದ್ಯವಾಗಿಸಿ, ಹೃದಯತುಂಬಿ ಹಾಡಿದ್ದಾರೆ. ನಾಡಿನ ಚರಿತ್ರೆಯನ್ನು ಕಣ್ಣಿಗೆ ಕಟ್ಟಿಸುವ ಚಿತ್ರ ಬಿಡಿಸಿದ್ದಾರೆ. "ಶತವರುಷಗಳ ಕನಸು" ಎಂಬ ಕವನದಲ್ಲಿ –

> ದಣಿದಿತ್ತು ಮೈಯೆಂಬ ಹಗಲು ಪವಡಿಸಿರೆ
> ಪ್ರಜ್ವಲಿಸಿ ಹೊಳೆಯಿತೊಂದು ಬೆಳಕು
> ಬಣ್ಣಿಸಲಸದಳವದರ ಥಳಕು !
> ಕನಸಿನೊಳಗೊಂದು ಹೊಂಗನಸು !
> ಲಕ್ಷೋಪಲಕ್ಷ ಯೋಧರವರು
> ಅಶ್ವಗಳ ಹತ್ತಿಹರು
> ಖಡ್ಗಗಳ ನೆತ್ತಿಹರು
> ಬಂಧುತ್ವ ಭಾವದಲಿ ಹೆದ್ದಾರಿ ತುಳಿದಿಹರು
> ಕಂಕಣವ ಕಟ್ಟಿಹರು"

---

೩೧. ವೀಣೆ (ಡಾ.ಲ.ಅ) ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೬೫,೮೧,೮೭,೯೭
೩೨. ಕಾವ್ಯ ಚಿಂತನ – ಶ್ರೀಕಾಂತ ಕಾನವಾಡ ಪು.೬,೮,೧೮
೩೩. ನಿರಂತರ (ಡಾ.ಲ.ಕಾವ್ಯಸಂಪುಟ) ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೧,೨,೩

'ವಸಾಹತುಶಾಹಿ' ಸಾಮ್ರಾಜ್ಯದ ದಾಹ ಹೊತ್ತು ಭಾರತಕ್ಕೆ ಬಂದ ಇಂಗ್ಲೀಷ ದೈತ್ಯ ಶಕ್ತಿಗೆ ಸೊಡ್ಡು ಹೊಡೆದುನಿಂತ ಕರ್ನಾಟಕದ ಚಿಕ್ಕ ಸಂಸ್ಥಾನಿ, ಸ್ವಾತಂತ್ರ್ಯದ ಕಹಳೆಯನ್ನೂದಿದ ಪ್ರಥಮ ನಾಡು. ಕಿತ್ತೂರಿನ ಧೀರನಾರಿ, ರಾಣಿ ಚನ್ನಮ್ಮಳ, ಶೌರ್ಯಸಾಹಸಗಾಥೆ, ಅವಳ ಬಲಗೈಬಂಟ ಸಂಗೊಳ್ಳಿ ರಾಯಣ್ಣನ ಸ್ವಾಮಿನಿಷ್ಠೆ ದೇಶ ಪ್ರೇಮದ ಬಗ್ಗೆ ಯಾರಾದರೂ ಯಾವತ್ತೂ ಹಾಡಿಕೊಳ್ಳುವ ಸ್ವಾತಂತ್ರ್ಯದ ಅಭಿಮಾನವನ್ನು ಕೆರಳಿಸುವ ಈ ಹಾಡು ನಮ್ಮದೆಯಾಗಿದೆ ಬದುಕುವವರ, ಅಭಿಮಾನದ ನಾಡು-ಬೀಡು, ಹೋರಾಟದ ನೆಲಗಳ ಸಹಿತ ಚರಿತ್ರಾರ್ಹವಾಗಿ ಮೂಡಿ ಬಂದಿದೆ. ನಾಡಭಕ್ತಿಗೀತೆಯನ್ನಿಸಿದರೂ, ಕ್ರಾಂತಿಯು ಪ್ರತಿಯೊಂದು ಸಾಲು, ನುಡಿಗಳಲ್ಲಿ ಜಲಪಾತದ ಭೋರ್ಗರೆತವನ್ನು ಮೂಡಿಸುತ್ತಾ ಸಾಗುತ್ತದೆ. ಜೊತೆಗೆ ಮಾತೃಭಾಷೆ ಕನ್ನಡ ಕಹಳೆಯನ್ನು ಉದಿಸುತ್ತ ಪ್ರತಿಯೊಬ್ಬರನ್ನು ಅವರ ತುಡಿತಗಳನ್ನು ಹಾಡಾಗಿಸುತ್ತದೆ. ಹೀಗೆ ಹಲವು, ನಾಡಗೀತೆಗಳು 'ನಾಡಿನ ಮಹತ್ವ ಸಾರುವ ಸಾರ' ಹೊಂದಿವೆ.

೪.೬ <u>ಬಂಡಾಯ</u>

'ತೋಳ ಬಂದಾವೋ ತೋಳ' ನಾಡಿನ ಚಿರಪರಿಚಿತ ಪ್ರಸಿದ್ಧ ಸಾಹಿತಿ ಶ್ರೀ ಬಾಳೇಶ ಲಕ್ಷೆಟ್ಟಿಯವರ ಇತ್ತೀಚಿನ ಒಂದು ಕವನ ಸಂಕಲನ.

ತನ್ನ ದೈನಂದಿನ ಬದುಕಿನಲ್ಲಿ ತಮಗೆದುರಾದ ಅನೇಕ ಅನುಭವಗಳಿಗೆ ಸ್ಪಂದಿಸುತ್ತಾ, ತನ್ನ ಸುತ್ತಲಿನ ಪರಿಸರದ ಬಗ್ಗೆ ಸದಾ ಜಾಗೃತ ಪ್ರಜ್ಞೆಯನ್ನು ಹೊಂದಿರುವ ಕವಿ, ಜೀವನದ ವೈವಿಧ್ಯತೆಯನ್ನೂ, ತಮ್ಮ ಕಾವ್ಯದಲ್ಲಿ ಹೊಮ್ಮಿಸುತ್ತಾರೆ. ತಮಗೆ ಅನಿಸಿದ್ದನ್ನೆಲ್ಲ ನೇರವಾಗಿ ಹೇಳುವ ಪ್ರಾಮಾಣಿಕತೆಯನ್ನು ಅವರ ಕವನಗಳಲ್ಲಿ ಕಾಣಬಹುದು.

ಬೆಂಕಿಯ ಕಾರುತಲಿರುವ ಸಮಾಜದಿ
ನಿಮ್ಮಂಥವರೇ ಬೇಕಲ್ಲ
ನವ್ಯ ಸಮಾಜವ ಬಯಸಿದ ಜನತೆಗೆ
ವೇಷಧಾರಿಗಳು ಬೇಕಿಲ್ಲ.

ಕವಿ ಇಲ್ಲಿ ಬಂಡಾಯದ ಸಂಕೇತವಾಗಿಸುತ್ತ, ಕಟ್ಟೀಮನಿಯವರ, ಸರಳ, ಹೋರಾಟದ, ಕಪಟವಿಲ್ಲದ ವ್ಯಕ್ತಿತ್ವ ಆಯ್ದುಕೊಂಡಿದ್ದು ಶ್ಲಾಘನೀಯ. ಇಂದಿನ ನವ್ಯ ಸಮಾಜ ಇಡಿಯಾಗಿ, ನಾಟಕ ಮಾಡುವುದರಿಂದಲೇ ತುಂಬಿ ಹೋಗಿದೆ ಎಂದು ಹೇಳುತ್ತಾ "ನಮಗೆ ವೇಷಧಾರಿಗಳು ಬೇಕಿಲ್ಲ" ಎಂಬ ಮಾತು ಇಂದಿನ ಡಾಂಭಿಕ ರಾಜಕಾರಣ, ಪೋಲಿಸ್

ವ್ಯವಸ್ಥೆ, ಧರ್ಮಾಧಿಕಾರಿಗಳ ವೇಷಗಳ ಹಿಂದಿನ ಕಪಟತೆ ಬೇಕಿಲ್ಲ. ನಿರಾಡಂಬರವಾದ, ವೇಷ ಯಾವುದಾಗಿದ್ದರೂ, ನಿರ್ಮಲ ಮನಸ್ಸಿನ, ಹೊಸ ಮನ್ವಂತರಕ್ಕೆ ಕಾರಣ ಶಕ್ತಿಯಾಗುವಂತಹ ವ್ಯಕ್ತಿಗಳು ಬೇಕಾಗಿದ್ದಾರೆಂದು, ಧೈರ್ಯದಿಂದ ಹೇಳಿದ್ದಾರೆ. ಶಾಂತಿ-ಸಮಾಧಾನಗಳು ಸ್ಥಾಪನೆಗೊಳ್ಳುವ ಬದಲು, ವರ್ಗಕಲಹ ಮತಾಂಧತೆ, ಸಂಘರ್ಷಗಳು ಹಿಂದಿನ ಅನೇಕ ವೇಷಧಾರಿಗಳಿಂದ ಸಮಾಜ ಇಡಿಯಾಗಿ ಬೆಂಕಿ ಕೆಂಡವಾಗಿ ಉರಿಯುತ್ತಿದೆ. ಇಂತಹ ಸಂದರ್ಭದಲ್ಲಿ ಕಪಟವಿಲ್ಲದೆ, ಹೋರಾಟಗಾರರು ವಾಸ್ತವದ ನೆಲೆಯೊಳಗೆ ಚಿಂತಿಸುವ ಶ್ರೇಷ್ಠ ವ್ಯಕ್ತಿಗಳ ಅವಶ್ಯಕತೆ ಇರವುದನ್ನು ಇದು ಮನದಟ್ಟು ಮಾಡಿಕೊಡುತ್ತದೆ. ಬಸವರಾಜ ಕಟ್ಟೀಮನಿಯಂತಹ, ಧೀಮಂತ ಬಂಡಾಯದ ಸಾಹಿತ್ಯವೂ ಇಂದು ಬೇಕಿದೆ ಎನ್ನುತ್ತದೆ ಈ ಕವನ.

ಲಕ್ಷೆಟ್ಟಿಯವರ ಸಂಗ್ರಹದಲ್ಲಿ, ಬದುಕು ಅರಳಲು ಬೇಕಾದ ಹಲವು ಸ್ತರಗಳ ಕಾವ್ಯ ಕುಸುಮ ಇದೆ. ಅದರದೊಲ್ಲೊಂದು ನವ್ಯಕಲೆಯ ಚಿತ್ತಾರ ರೂಪುಗೊಂಡು ಅರಳಿದೆ. "ಇನ್ನೂತನಕ ಕಲೀಲಿಲ್ಲ" ಎಂಬುದರಲ್ಲಿ ಆಡು ಭಾಷೆಯ ಹಾಡಿನ ಹಾಡು ಪಾಡಾಗಿ ಬಂದು, ಮನದ ವೇದನೆಗೊಂದು ವೇದಿಕೆ ಮಾಡಿಕೊಂಡು, ಅವ್ಯವಸ್ಥೆಯನ್ನು ಒದ್ದೋಡಿಸುವುದನ್ನು ಒಂದು ರೀತಿ ಕ್ರಾಂತಿ ಕಾವ್ಯವಾಗಿ ಕಟ್ಟಿ ಇಟ್ಟಿದ್ದಾರೆ.

ನಮ್ಮ ಬಾಳೇದಾಗ ಬೆಂಕಿ ಬಿದ್ದ
ಉರ್‍ಯಾಕ ಹತ್ತೈತಿ ಅನ್ನೋದು
ಇಷ್ಟು ದಿನ ಆದ್ರೂ ತಿಳಿವಲ್ತು
ಬ್ರಾಂತಿ ಬಿಟ್ಟುಗೊಟ್ಟು ಕ್ರಾಂತಿ ಕಿಡಿಯಾಗಿ
ಒಂದು ಆಗಿ ನಿಲ್ಲೋದನ್ನು
ಇನ್ನೂತನಕ ಕಲೀಲಿಲ್ಲ

ನಮ್ಮ ಬದುಕಿನ ವ್ಯವಸ್ಥೆ ಅನ್ನೋದು, ನಮ್ಮದಾಗಿ ಉಳಿದಿಲ್ಲ. ನಮ್ಮ ತನಕ ಬೆಂಕಿ ಹತ್ತೇತಿ, ಎಷ್ಟು ಕಾಲದಿಂದ ನಾವು ಇದs ರೀತಿ, ಬದುಕುತ್ತಾ ಇದ್ದೀವಿ ಆದ್ರ ನಾವ ಇನ್ನೂ ಏನೂ ಕಲಿತಿಲ್ಲ. ನಾವೆಲ್ಲ ಬೇರೆ ಬೇರೆ ಎಂಬ ಭಿನ್ನತೆ ಬ್ರಾಂತಿಯಲ್ಲಿ ಬದುಕುತ್ತಿರುವದು ಅವಮಾನ ಮತ್ತು ತೀರಾ ಅಪಮಾನ. ನಮ್ಮನ್ನು ಶೋಷಿಸುವವರು, ನಮ್ಮ ಮೇಲೆ

---

೩೪. ಕಾವ್ಯ ಚಿಂತನ - ಶ್ರೀಕಾಂತ ಕಾನವಾಡ ಪು.೮೩,೯೭
೩೫. ಏಣಿ(ಡಾ.ಲ.ಅ.)ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೭೯.೮೬.೮೭
೩೬. ನಿರಂತರ (ಡಾ.ಲ.ಕಾವ್ಯಸಂಪುಟ)ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೬೬

ದಬ್ಬಾಳಿಕೆ ಮಾಡುವವರ ವಿರುದ್ಧ ನಾವೆಲ್ಲ ಯಾಕ ಇನ್ನೂ ಒಂದಾಗಿ, ಎದುರಾಗಿ ನಿಂತಿಲ್ಲ ಎಂದು ಕೇಳುತ್ತಾರೆ.

## ೪.೭ ಭ್ರಷ್ಟಾಚಾರ ವಿರೋಧಿ ನಿಲುವು

'ಭ್ರಷ್ಟ+ಆಚಾರ'= ಭ್ರಷ್ಟಾಚಾರ. ಮನುಷ್ಯ ಭ್ರಷ್ಟವಾಗಿ ನಡೆದುಕೊಳ್ಳವುದೇ ಭ್ರಷ್ಟಾಚಾರ. ಕೇವಲ ಲಂಚಗುಳಿತನ ಮಾತ್ರ ಭ್ರಷ್ಟಾಚಾರವಲ್ಲ. ಆಚಾರ. ವಿಚಾರ, ನಡೆ-ನುಡಿಗಳಲ್ಲಿ ಕ್ರಮ ವಿಪರ್ಯಾಸ ತಪ್ಪಿದರೆ ಅದು ಭ್ರಷ್ಟಾಚಾರವೆನಿಸುತ್ತದೆ. ಬಾಳೇಶ ಲಕ್ಷೆಟ್ಟಿಯವರು ತಮ್ಮ ಕಾವ್ಯ ಸಂಗಮದಲ್ಲಿ ಭ್ರಷ್ಟಾಚಾರದ ಪರಮಾವಧಿಯನ್ನು ಕುರಿತು ಕವನ ರಚಿಸಿದ್ದಾರೆ.

ಒದ್ದರ ಒದಿಸಿಕೋತೀವಿ
ಗುದ್ದಿದರ ಗುದ್ದಿಸಿಕೋತೀವಿ
ಭೀಮನಹಾಂಗ ತಿರುಗಿ ಗುದ್ದಾಕ
ಇನ್ನೂತನಕ ಕಲೀಲಿಲ್ಲ

ಇಂದಿನ ವ್ಯವಸ್ಥೆಯ ಅವಸ್ಥೆಯ ತುಂಬಾ ಕ್ಷೀಣಿಸಿದೆ. ಶ್ರೀಮಂತರು, ಮತ್ತಷ್ಟು ಶ್ರೀಮಂತರಾಗ ಬೇಕೆನಿಸುತ್ತಾರೆ. ಅಧಿಕಾರಸ್ಥರು, ಮತ್ತಷ್ಟು ಅಧಿಕಾರ ಬೇಕೆಂದುಕೊಳ್ಳುತ್ತಾರೆ. ನಾಯಕರಿಗೆ ಇನ್ನಷ್ಟು ನಾಯಕತ್ವ ಬೇಕಾಗುತ್ತದೆ. ಇವರೆಲ್ಲ ಸಾಮಾನ್ಯರನ್ನು ತಮ್ಮ ಕೈಗೊಂಬೆಗಳಾಗಿಸಿಕೊಂಡು, ತಮ್ಮ ಧಿಮಾಕು ತೋರುತ್ತಾರೆ. ಇದರಿಂದಲೇ, ಭ್ರಷ್ಟಾಚಾರ, ಅನ್ಯಾಯ, ಆಕ್ರಮಣ, ಮೋಸ, ವಂಚನೆಗಳು ಜರುಗುತ್ತಲಿವೆ. ಇಷ್ಟೆಲ್ಲ ಗುದ್ದಿಕೆಗಳು ನಮಗೆ ಬೀಳುತ್ತಲಿದ್ದರೂ ನಾವಿನ್ನೂ ಅವುಗಳನ್ನು ಅನುಭವಿಸುತ್ತಾ ಇದ್ದೇವೆಯೇ ಹೊರತು ತಿರುಗಿ ಅಂತಹ ಗುದ್ದನ್ನು ನೀಡುತ್ತಿಲ್ಲವಲ್ಲ ಎಂಬುದು ಕವಿಯ ಚಿಂತನೆ.

## ೪.೮ ವೈಚಾರಿಕ

ಶ್ರೀ ಲಕ್ಷೆಟ್ಟಿಯವರು ತಾನು ಬದುಕಿದ ಕಾಲದ ಪರಿಸರಕ್ಕೆ ಸ್ಪಂದಿಸಿದ್ದು, ಪರಿಸರದ ಧ್ವನಿಯಾಗಿ ಪ್ರತಿಕ್ರಿಯೆಯಾಗಿ 'ಯಕ್ಷಪ್ರಶ್ನೆಯ' ಕವಿತೆಗಳಲ್ಲಿ ಮೂಡಿಬಂದಿದೆ. ಕವಿಯು ಬೆಳೆದ ಶೋಷಣಾಮಯ ಪರಿಸರ ಒಂದು ದೃಷ್ಟಿಯಿಂದ ಅವನ ಕಾವ್ಯ ಚಿಂತನೆಗೆ ಪ್ರೇರಕವಾಯಿತೆಂದೇ ಹೇಳಬೇಕು. ಶ್ರೀ ಲಕ್ಷೆಟ್ಟಿಯವರು ತಮ್ಮ ಪರಿಸರದೊಂದಿಗೆ ಸ್ಪಂದಿಸಿದ

---

೩೭.ಕಾವ್ಯಚಿಂತನ – ಶ್ರೀಕಾಂತ ಕಾನವಾಡ ಪು.೪೯

ಫಲಗಳು ಇಲ್ಲಿಯ ಬಹುಪಾಲು ಕವಿತೆಗಳು. ಅವು ಮೂಲತಃ ಪ್ರತಿಭಟನಾತ್ಮಕವಾಗಿದೆ. ಅವುಗಳ ಒಟ್ಟು ಉದ್ದೇಶ ಹಿಂಸೆ-ಶೋಷಣೆಗಳಿಂದ ಮುಕ್ತವಾದ ಪ್ರಗತಿಪರ ಸಮಾಜವೊಂದರ ನಿರ್ಮಾಣವೇ ಆಗಿದೆ. ಹೀಗಾಗಿ ಇವರ ಯಕ್ಷ ಪ್ರಶ್ನೆಯು ಬಹುಪಾಲು ಕವಿತೆಗಳು ಸಾಹಿತ್ಯಕ್ಕಿಂತ, ಗುಣಕ್ಕಿಂತಲೂ ಪ್ರತಿಭಟನೆಯ ಗುಣವನ್ನೇ ಆಶ್ರಯಿಸಿದ್ದು ಮಹತ್ವದ ಸಂಗತಿ. ವರ್ತಮಾನದ ಬದುಕಿನಲ್ಲಿ ಮೇಲಿಂದ ಮೇಲೆ ಕೇಳುವ ಸಮಾಜಪರಿವರ್ತನೆ, ಪ್ರತಿಭಟನೆ, ಬಂಡಾಯ, ಕ್ರಾಂತಿ, ಶೋಷಣೆ, ಕ್ರೌರ್ಯ ಇವೇ ಮೊದಲಾದ ವಿಷಯಗಳು ಪ್ರಸ್ತುತ ಸಂಕಲನದಲ್ಲಿ ಅರ್ಥಪೂರ್ಣವಾಗಿ ನಿರೂಪಿತವಾಗಿದೆ.

ಇಲ್ಲಿ ಕಣ್ಣೀರು, ಕಾತರ, ಚೀತ್ಕಾರ, ನೋವು-ನರಳಾಟ, ಮರೆಮೋಸ ವಂಚನೆ, ಹಗಲು ವ್ಯಭಿಚಾರ, ಅಪನಂಬಿಕೆ, ಅಪಲಾಪಗಳಿಂದ ಕೊಳೆತು ನಾರುವ ಪ್ರತಿಗಾಮಿ ಸಮಾಜದಲ್ಲಿ ಕವಿಯು ಪ್ರಗತಿಗಾಮಿಯಾಗಿ ಉನ್ನತ ಬದುಕನ್ನು ಬದುಕಲು ಹಂಬಲಿಸುತ್ತಾನೆ. ಆದರೆ ಅವನ ಆಶೆಯನ್ನು ಮುರಿಯಲು ಹೊಂಚುಹಾಕಿದ ಹತ್ತಾರು ಪ್ರಶ್ನೆಗಳು ಯಕ್ಷಪ್ರಶ್ನೆಯಾಗಿ ಕಾಡುತ್ತಿವೆ. ಕವಿ ಮಾತ್ರ ಎದೆಗುಂದದೆ, ಧೈರ್ಯ-ಸ್ಥೈರ್ಯಳಿಂದ,

ಪ್ರತಿಗಾಮಿ ಶಕ್ತಿಗಳ ಎದುರಿಸಿ
ಪ್ರಗತಿಗಾಮಿ ಕಿಡಿಯಾಗಿ
ಕಿಚ್ಚಾಗಿ
ಶೋಷಣೆಯ ಗರುಡಗಂಬಕೆ
ಬೆಂಕಿ ಹಚ್ಚಬಹುದೆ?

ಎಂಬ ಪ್ರಶ್ನೆಯ ಮೂಲಕವೇ ಶೋಷನೆಯ ಗರುಡಗಂಬಕೆ ಬೆಂಕಿ ಹಚ್ಚಲು ಮುನ್ನುಗ್ಗುತ್ತಿದ್ದಾನೆ. ಹೀಗಾಗಿ 'ಯಕ್ಷಪ್ರಶ್ನೆ'ಯ ಬಹುತೇಕ ಕವಿತೆಗಳು ಬರೀ ಕವಿಯ ಭಾವನಾತ್ಮಕ ನೆಲೆಯಲ್ಲಿ ನಿಲ್ಲದೆ, ಸಾಮಜಿಕ ಕ್ರೌರ್ಯವನ್ನು ಪ್ರತಿಭಟಿಸುವ ಸಂಕೇತಗಳಾದದು ಗಮನೀಯ. ಪ್ರಸ್ತುತ ಯಕ್ಷಪ್ರಶ್ನೆ ಕವಿತೆ ಧ್ರುವ ನಕ್ಷತ್ರ, ಸ್ವತಂತ್ರ ಸೇನೆ, ಬುದ್ಧ, ಕಲಿಭೀಮ, ರಾಮ, ಹರಿಶ್ಚಂದ್ರ ಇವೇ ಮುಂತಾದ ಪ್ರತಿಮೆಗಳ ಮೂಲಕ ಅರ್ಥವಿಸ್ತಾರ ಪಡೆದದು ಮಹತ್ವದ್ದು.

ಸದಾ ತೆರೆದ ಕಣ್ಣಿನಿಂದ ತಮ್ಮ ಒಳ-ಹೊರಗನ್ನು ನಿರೀಕ್ಷಿಸುವ ಕವಿ; ತಮ್ಮ ಈ ಕಾಳಜಿಯನ್ನು ಅನೇಕ ಕವಿತೆಗಳಲ್ಲಿ ತೋರಿದ್ದಾರೆ. "ರಕ್ತ ಹೀರಿ, ಬುದ್ಧಿ ಸೀಮುವ" ಚಪಲದ

ರಾಜಕಾರಣಿಗಳನ್ನು ಪಾವಗಡದಲ್ಲಿ ಹಾವಳಿ ಯೆಬ್ಬಿಸಿದ ತೋಳಗಳೊಂದಿಗೆ, ಬೌದ್ಧಿಕ ಶೋಷಣೆಯನ್ನು "ಬುದ್ಧಿ ಸೀಪುವ" ಎಂಬ ಸಾಲು ಮನೋಜ್ಞವಾಗಿ ಧ್ವನಿಸುತ್ತದೆ. ಈ ಕವನದ ಶೀರ್ಷಿಕೆಯೇ, ಕವನ ಸಂಕಲನದ ಹೆಸರಾಗಿರುವುದೊಂದು ವಿಪರ್ಯಾಸ.

ಶ್ರೀ ಲಕ್ಷೆಟ್ಟಿಯವರು ಎಂದೂ ಕೈಚೆಲ್ಲಿಕೊಂಡು ಕೂಡ್ರುವ ನಿರಾಶಾವಾದಿಯಲ್ಲ; ಬದುಕಿನಲ್ಲಿ ತುಂಬ ಭರವಸೆಯನ್ನು ತಾಳಿದ ಆಶಾವಾದಿ. ಆದುದರಿಂದಲೇ:

ಶೋಷಣೆ ರಹಿತ ಸಮಾಜದ
ಹೊಸ ಹಾಡು ನೀನು
ಭವಿಷ್ಯ ಬರೆಯುವ
ಇತಿಹಾಸಕಾರ್ತಿ ನೀನು
ನೀ ಸತ್ತರೇನಂತೆ ನಿನ್ನ ಸಂತಾನ
ಶೋಷಣೆಯ ಗರುಡಗಂಬಕೆ
ಬೆಂಕಿ ಹಚ್ಚಲಿ ಕೋಳಿ;
ಬೆಂಕಿಯಲಿ ಬೆಂದು
ರಾಕ್ಷಸರೆಲ್ಲ ಉರಿದಾಗ
ಮನುಕುಲದ ಪುನರುದಯ!!



ಎಂಬ ಸಾಲುಗಳನ್ನು ಮಾರ್ಕ್ಸ್‌ನ ಸಿದ್ಧಾಂತದ ಹಿನ್ನೆಲೆಯಲ್ಲಿ ನಿರೂಪಿಸುತ್ತಾನೆ. ಶೋಷಣೆಯ ನಿರ್ಮೂಲನೆ ಶೋಷಿತ ನಿರ್ನಾಮಗೊಂಡಾಗಲೇ; ಮನುಕುಲದ ಪುನರುದಯ. ಶೋಷಿತ ರಾಕ್ಷಸರೆಲ್ಲ ಬೆಂಕಿಯಲ್ಲಿ ಸುಟ್ಟುಬೂದಿಯಾದಾಗಲೇ ಎಂಬ ಧೃಡ ವಿಶ್ವಾಸ ಕವಿಯದು. ಹೀಗಾದಾಗ ಮಾತ್ರ ಭವಿಷ್ಯದಲ್ಲಿ ಶೋಷಣಾರಹಿತ ಸಮಾಜದ ಶುಭ ಸೂಚನೆಗಳು ಕವಿಗೆ ಗೋಚರಿಸುತ್ತವೆ. ಈ ಬಗೆಯ ಶೋಷಣಾರಹಿತ ಬದುಕಿಗಾಗಿ ಕವಿ ಆಶಾವಾದಿಯಾಗಿದ್ದಾನೆ. ಅಸುರಿಶಕ್ತಿ ದಮನಗೊಂಡಾಗ, ಸಮತೆ, ಸ್ವಾತಂತ್ರ್ಯ ಪ್ರಾಪ್ತವಾಗಿ ಮುಕ್ತ ಬದುಕ ಬದುಕಬಹುದೆಂಬ ಭವಿಷ್ಯವಾಣಿಯನ್ನೂ ಕವಿ ಇಲ್ಲಿ ನುಡಿಯುತ್ತಾನೆ.

---

೩೮. ಕಾವ್ಯ ಚಿಂತನ – ಶ್ರೀಕಾಂತ ಕೂನವಾಡ ಪು.೪೯

೩೯. ವೀಣೆ (ಪಾ.ಲ.ಅ.) ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೭೯

## ೪.೯ ವ್ಯಕ್ತಿ-ವ್ಯಕ್ತಿತ್ವ

- **ನೆಹರು**

ಪಕ್ಕಾ ಗೋಕಾವಿ ನಾಡಿನ ನೆಲದ ಭಾಷೆಯ ಮೂಲಕ ಅಂದು ಇವರು ಕವಿ ಆಗುವ ಸಂದರ್ಭದಲ್ಲಿ ಪ್ರಧಾನಿಯಷ್ಟೇ ಅಲ್ಲ, ಯುವಕರಿಗೆ ಆದರ್ಶವೆನಿಸಿದ್ದ, 'ಜವಾಹರಲಾಲ ನೆಹರೂ'ರವರನು ಕುರಿತು ಬರೆದ ಕವನ, ಜಾನಪದವಾಗಿ ಹೊರಹೊಮ್ಮಿದೆ. ಇಲ್ಲಿನ ವಿಶೇಷಣಗಳು, ಶಬ್ದಗಳ ಸಂಯೋಜನೆ, ಎಲ್ಲವೂ ಪೂರ್ವ ನಿರ್ಧಾರಿತವೆನ್ನಿಸಿದರೂ ಸ್ವಾಭಾವಿಕತೆಯನ್ನು ಬಿಟ್ಟುಕೊಟ್ಟಿಲ್ಲ.

ತುಂಮ್ರಿ ಹಣ್ಣಂಗ-ಮೈ-ಕೈ ಬಣ್ಣ
ಗಾಂಧಿ ಕಣ್ಣಂಗ ಈತನ ಕಣ್ಣ
ಇಂವ ಮುಟ್ಟಿದ್ದೆಲ್ಲ ಬರಿ ಹೊನ್ನ.

ನೆಹರೂರವರ ಮೈ ಬಣ್ಣ ವ್ಯಕ್ತಿತ್ವ ಗೌರವಗಳು, ಸ್ಥಾನಮಾನಗಳ ಬಗ್ಗೆ ಹೇಳುವಾಗ ಸಹಜ ಅವರ ಕುರಿತಾದ ಉನ್ನತ ಮರ್ಯಾದೆ ಎದ್ದು ಕಾಣುತ್ತದೆ. ನೆಹರೂರ ವ್ಯಕ್ತಿತ್ವವನ್ನು ಲಕ್ಷೆಟ್ಟಿಯವರು ಈ ಹಾಡಿನ ಮೂಲಕ ಹಾಡಿ ತಿಳಿಯಬಹುದು.

- **ಬಸವಣ್ಣ**

ಕ್ರಾಂತಿಪುರುಷ ಜಗಜ್ಯೋತಿ ಬಸವಣ್ಣನವರ ಬಗ್ಗೆ "ವಿಶ್ವಸಜ್ಯೋತಿ"ಯ 'ಕವನ'ವನ್ನು ಹಾಡಿ ಬೆಳಗಿದ್ದಾರೆ. "ಬಸವಣ್ಣನನ್ನು ಕಂಡಾಗ" ಎಂಬ ಕವನದಲ್ಲಿ ಒಂದು ಕಾಲ್ಪನಿಕ ಚಿತ್ರವನ್ನು ಎದುರಲ್ಲಿ ಮೂರ್ತಿ ಪ್ರತಿಷ್ಠಾಪಿಸಿಕೊಂಡು ಬರೆದ ಒಂದು ಕವನ. ಬಸವಣ್ಣನವರ ಮೇರು ವ್ಯಕ್ತಿತ್ವದ ಬಗ್ಗೆ ಕವಿಯ ಭಾವವು ಇಲ್ಲಿ ವ್ಯಕ್ತಗೊಂಡಿದೆ. ಕವನ ಚಿಕ್ಕದಾಗಿದ್ದರೂ ಹಿರಿದಾದ ಅರ್ಥವನ್ನು ನೀಡುವಲ್ಲಿ ಯಶಸ್ವಿಯಾಗಿದೆ.

- **ಬೇಂದ್ರೆಯೊಂದಿಗೆ ಚನ್ನವೀರ ಕಣವಿ**

ಪ್ರಸಿದ್ಧ ಕಾವ್ಯ ಗಾರುಡಿಗರನ್ನು ಕುರಿತು ಬರೆದ ಕವನಗಳು, ಒಂದು ರೀತಿ ಐತಿಹಾಸಿಕ ವ್ಯಕ್ತಿತ್ವವನ್ನು ಪರಿಚಯಿಸುವ ಕ್ರಿಯೆಯಾಗಿದೆ. ಶ್ರೀ ಲಕ್ಷೆಟ್ಟಿಯವರ ಕಾವ್ಯದ ಸಾಲುಗಳು ಪ್ರತಿಮೆ ಹಾಗೂ ರೂಪಕವೊಂದನ್ನು ಇಲ್ಲಿ ಬೇಂದ್ರೆಯೊಂದಿಗೆ ಚನ್ನವೀರ

---

೪೦. ಕಾವ್ಯಚಿಂತನ – ಶ್ರೀಕಾಂತ ಕಾನವಾಡ ಪು.೧೫

-ಅದೇ- ೧೭

೪೧. ವೀಣೆ (ಜಾ.ಲ.ಅ.) ಸಂ.ಡಾ.ಎಚ್.ಆಯ್.ತಿಮ್ಮಾಪೂರ ಪು.೭೫. ೭೮

ಕಣವಿಯವರನ್ನು ಕುರಿತು ಕಾವ್ಯ ರೂಪಿಸಿದ್ದಾರೆ. ಕಣವಿಯವರು ವರಕವಿ ಬೇಂದ್ರೆಯವರ ನಾಡಿನಲ್ಲಿ ಉಸಿರು ಪಡೆದವರು, ಹಾಗಾಗಿ ಕಣವಿಯವರ ಕಾವ್ಯದಲ್ಲಿ ಒಂದು 'ಕಣವಿ' ಉಸಿರು ಪಡೆದವರು, ಹಾಗಾಗಿ ಕಣವಿಯವರು ಕಾವ್ಯದಲ್ಲಿ ಒಂದು ಕಣವಿ (ಬೆಟ) ವಾಗಿ ಇಂದು ನಮ್ಮೆದುರು ನಿಂತಿದ್ದಾರೆ. ಅಂತಹವರ ಕುರಿತಾದ ಈ ಕವನ ಹೇಳತ್ತದೆ.

ಗಿಳಿಹಂಸೆ ಕೋಗಿಲೆಯನೊಡಗೂಡಿ ಬೆಳ್ಳಕ್ಕಿ
ಇಳೆಯೊಳಗೆ ಮಂಗಲವ ಹಾಡುತಿರಲು
'ಹೊಂಬಳ'ದ ಹೊಂಬಯಕೆ ಹೊಗರೇರಿ ನಿಂತಿಹದು
'ಕಣವಿ' ರೂಪವ ತಳೆದು ss! ಆಹ ತಳೆದು !
ಕಾವ್ಯವೇ ನೀವಾಗಿs ನೀವೆs ಕಾವ್ಯವು ಆಗಿ
ಮನೆಮನೆಗೆ ಹಚ್ಚಿದಿರಿ ಕಾವ್ಯ ದೀಪ
ಭಾವಜೀವನವೆಂಬ ಗೌರಿಶಂಕರವೇರಿ
'ಮಧುಚಂದ್ರ' ನೈತರಲು ಮಧುರ ರೂಪ!

ಕಣವಿಯವರೇ ಕಾವ್ಯವಾಗಿಯೂ, ಕಾವ್ಯವೇ ಕಣವಿಯವರಾಗಿ, ಕಾವ್ಯದ ಜೀವಂತಿಕೆಗೆ ಮೆರಗು ನೀಡಿದ್ದು, ನವ್ಯ ಕಾವ್ಯದ ಈ ಸಂದರ್ಭದಲ್ಲಿ ಕಾವ್ಯಕ್ಕೆ ಕೊರೆಯುಂಟೆ ಎಂಬಂತೆ ಇಲ್ಲಿ ಕವನ ಮೂಡಿಬಂದಿದೆ.

- <u>ಡಿ.ಎಸ್.ಕರ್ಕಿ</u>

"ಹಚ್ಚೇವು ಕನ್ನಡದ ದೀಪ" ಕವಿಗೆ, ದೀಪದಾರುತಿ ಬೆಳಗಿದ್ದಾರೆ ಲಕ್ಷೆಟ್ಟಿಯವರು ಅವರ ಕುರಿತು ಬರೆದ ಕವನದಲ್ಲಿ

ಒಲವಿನ ಮೇಲೆ ಕಲ್ಪನೆ ಕೂಟ
ಜೀವದ ಒಳಗೆ ಥಕಥೈಥಾಟ
ಭಾವದ ಕೂಡ ಭಾವನೆಯಾಟ

ಅದ್ಭುತವೆನ್ನುವಂತೆ ಕಟ್ಟಿದ ಈ ಬಾವದಾಟದ ಕವನದಲ್ಲಿ ಲಕ್ಷೆಟ್ಟಿಯವರು ಭಾವ ಕವಿಗೆ ಭಾವದಿಂದಲೇ ಉತ್ತರಿಸಿದ್ದಾರೆ.

---

೪೨. ಕಾವ್ಯ ಚಿಂತನ- ಶ್ರೀಕಾಂತ ಕಾನವಾಡ ಪು.೨೨, ೨೪, ೨೫

* **<u>ಕೃಷ್ಣಮೂರ್ತಿ ಪುರಾಣಿಕ</u>**

ನಾಡಿನ ಸಾಹಿತಿ ಶ್ರೀ ಕೃಷ್ಣಮೂರ್ತಿ ಪುರಾಣಿಕರನ್ನು ಹತ್ತಿರದಿಂದ ಬಲ್ಲ ಕವಿ, ಅವರ ಬಗ್ಗೆ ತಮಗಿರುವ ಶ್ರದ್ಧೆ ಆದರಗಳನ್ನು ಈ ಮೂಲಕ ವ್ಯಕ್ತಗೊಳಿಸುತ್ತಾರೆ. 'ತೋಳು ಬಂದಾವೋ ತೋಳ' ಕವನ ಸಂಕಲನ 'ಪುರಾಣಿಕ'ರಿಗೆ ಒಂದು ಹೃದ್ಯ ಕವನ. ಸಮಾಜದಿಂದ, ಸಂಸ್ಥೆಗಳಿಂದ ಉಪೇಕ್ಷಿತರಾದ ಪುರಾಣಿಕರ ಜೀವನವನ್ನು ಕುರಿತು, ಸಹಾನುಭೂತಿ ಪರವಾದ ನಿಲುವಿನೊಂದಿಗೆ ಕವಿತೆ ಸಾಗುತ್ತದೆ, ತಮ್ಮ ಹೃದಯದಳಲನ್ನು ದಿವಂಗತರೆದುರು ತೆರೆದಿಟ್ಟು, ಕೇಳುತ್ತಾರೆ.

". . . . . ಇನ್ನೂ ಏನೇನೋ ಬರೆಯಬೇಕಿದೆ,
ಪುರಾಣಿಕರೆ ದಯವಿಟ್ಟು ತಿಳಿಸುವಿರಾ,
ನಿಮ್ಮ ಈಚಿನ ವಿಳಾಸವೇನು?" (ಪುರಾಣಿಕರಿಗೆ)

ಪುರಾಣಿಕರು ಕನ್ನಡ ಕಾವ್ಯದ ಸಂದರ್ಭದಲ್ಲಿ ಕಾದಂಬರಿಗಳ ಸ್ಥಿತಿಯಲ್ಲಿ ಒಂದು ಜೀವಂತ ಉದಾಹರಣೆಯನ್ನಿಸಿದ್ದನು ಹೀಗೆ ನೋಡಬಹುದು.

ಸುಜ್ಞಾನದಾನಂದ ಭಾವಜಲಧಿಯೊಳಿಂದು
ಸ್ನೇಹ – ವಾತ್ಸಲ್ಯದಮೃತಝುರಿ ಹರಿಸಿದಿರಿ.
ಸಾಹಿತ್ಯ ಶಾರದೆಯ ಹಣೆಗೆ ಕುಂಕುಮ ಹಚ್ಚಿ
ಭಾಗ್ಯದೈಸಿರಿಯಲ್ಲಿ ಸೌಭಾಗ್ಯ ಬೆಳಗಿದಿರಿ.

ಕವಿ ಮನಸ್ಸು ಕವಿಯ ಕುರಿತು ಕಾವ್ಯ ರಚನೆಯಲ್ಲಿ ತೊಡಗಿದ ಸಂದರ್ಭವೇ ಅದ್ಭುತ. ಅಲ್ಲಿ ಇಂತಹ ಕಾವ್ಯದ ರಚನೆ ಮಾತ್ರ ಸಾಧ್ಯ

೪.೧೦ <u>ಸ್ತ್ರೀ ಸಂವೇದನೆ</u>

ಶ್ರೀ ಲಕ್ಷೆಟ್ಟಿಯವರ ಕಾವ್ಯದಲ್ಲಿ ಮಹಿಳಾ ಸಂವೇದನೆ ಕುರಿತು ಹೇಳುವದಕ್ಕಿಂತ ಪೂರ್ವದಲ್ಲಿ ಅಲ್ಲಮಪ್ರಭುದೇವರು ಹೇಳಿದ ಹಾಗೆ 'ಹಿಂದಣ ಹೆಜ್ಜೆಯನ್ನರಿತಲ್ಲದೆ ನಿಂದ ಹೆಜ್ಜೆಯನ್ನರಿಯಬಾರದು' ಇದರ ತಾತ್ಪರ್ಯವೇನೆಂದರೆ ಇಂದಿನ ಕಾವ್ಯದಲ್ಲಾಗಲಿ ಅಥವಾ ಸಾಹಿತ್ಯದಲ್ಲಾಗಲಿ ಹಿಂದೆ ಯಾವ ರೀತಿ ಸ್ತ್ರೀಯರಿಗೆ ಸ್ಥಾನಮಾನವನ್ನು ಕೊಟ್ಟಿದ್ದರು ಅನ್ನುವದನ್ನು ಮೊದಲು ಅರಿತುಕೊಂಡರೆ ವರ್ತಮಾನದ ಕಾವ್ಯದಲ್ಲಿ ಯಾವ ಸ್ಥಾನಮಾನ ಇದೆ ಎಂಬುದನ್ನು ಅವಲೋಕನ ಮಾಡಬಹುದು

---

೪೩. ಕಾವ್ಯಚಿಂತನ – ಶ್ರೀಕಾಂತ ಕಾನವಾಡ ಪು. ೨೭

ನಮ್ಮಲ್ಲಿರುವ ಎರಡೇ ಎರಡು ಜಾತಿ ಎಂದರೆ ಸ್ತ್ರೀ ಮತ್ತು ಪುರುಷ. ಪುರಾತನ ದ್ರಾವಿಡ ಶೈವ ಸಂಸ್ಕೃತಿಯಲ್ಲಿ ಹೆಣ್ಣನ್ನು ಶಕ್ತಿದೇವಿ ಎಂದು ಪೂಜಿಸಿದ್ದಾರೆ. ಶಕ್ತಿದೇವಿಯೇ ಜಗಜ್ಜನನಿಯಾಗಿದ್ದಾಳೆ. "ಜನನಿ ಜನ್ಮಭೂಮಿ" ಎನ್ನುವಂತೆ ಶ್ರೀ ಬಾಳೇಶರು ಸಮಜದಲ್ಲಿ ಹೆಣ್ಣಿನ ಸ್ಥಾನ, ಮಾನ, ಗೌರವಗಳನ್ನು ಕುರಿತು ಹೇಳಿದ್ದಾರೆ. "ಹೆಣ್ಣು ಮಾಯೆಯಲ್ಲ" ಎಂಬ ತತ್ತ್ವಪದದಲ್ಲಿ ಹೆಣ್ಣಿನ ಮಹತ್ವ ಕಾಣಸಿಗುತ್ತದೆ.

ಇದರಲ್ಲಿ ಹೆಣ್ಣು ಮಾಯೆಯಲ್ಲ, ಅದು ಅವಳು ಬದುಕಿನ ಕಣ್ಣು ಅವಳಿದ್ದರೆ, ನಮ್ಮ ಬದುಕು ಹಸನಾಗಿರಬಹುದು. ಅವಳಿಲ್ಲದಿರೆ ಬದುಕೇ ಬಂಜರ. ಅದಕ್ಕಾಗಿ ಅಲ್ಲಮ ಪ್ರಭುಗಳ ತತ್ತ್ವಪದ ವಚನವನ್ನಿಲ್ಲಿ ರೂಪಕವಾಗಿರಿಸಿ, ತಮ್ಮ ಭಾವದ ನೆಲೆಯೊಳಗೆ ತತ್ತ್ವ ಪದವಾಗಿ ಆಡದಿರು ಎಂದಿಗೂ ಆಡದಿರು, ಹೆಣ್ಣು ಮಾಯೆಯೆಂದು. ಎಲ್ಲರಿಗೂ ತಿಳಿಯುವಂತೆ, ತಿಳಿದುಕೊಳ್ಳವಂತಹ ಕವನವನ್ನು ಇಲ್ಲಿ ತಮ್ಮ ಸಂಗ್ರಹದಿಂದ ಹೊರಹಾಕಿದ್ದಾರೆ.

ಮನು ವಿಚಾರಗಳನ್ನು ಹೇಳಿದ್ದರೆ ತಪ್ಪಾದೀತು. ಆತನು ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ರಕ್ಷಂತಿ ಸ್ಥವೀರೆ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ॥ ಅಂದರೆ ಸ್ತ್ರೀಯರನ್ನು ಬಾಲ್ಯದಲ್ಲಿ ತಂದೆ, ಯೌವನದಲ್ಲಿ ಗಂಡ, ಮುಪ್ಪಿನಲ್ಲಿ ಮಕ್ಕಳು ರಕ್ಷಿಸುತ್ತಾರೆ. ಆದ್ದರಿಂದ ಸ್ತ್ರೀಗೆ ಸ್ವಾತಂತ್ರ್ಯ ಕೊಡುವದು ಸರಿಯಲ್ಲವೆಂದು ಹೇಳಿದ್ದಾನೆ.

೧೨ನೇ ಶತಮಾನದ ಮಹಾಮಾನವತಾವಾದಿ ಬಸವಣ್ಣನವರು ಲಿಂಗಭೇದವನ್ನು ಬೇರು ಸಮೇತ ಕಿತ್ತೆಸೆದರು. ಸ್ತ್ರೀಗೆ ಸಮಾನವಾದ ಸ್ಥಾನಮಾನವನ್ನು ಕಲ್ಪಿಸಿಕೊಟ್ಟರು. ಶರಣರು ಲಿಂಗಭೇದಕ್ಕೆ ಅವಕಾಶವನ್ನೆಂದಿಗೂ ಕೊಡಲಿಲ್ಲ. ದೇವರ ದಾಸಿಮಯ್ಯನವರು—

ಮೊಲೆ ಮೂಡಿ ಬಂದರೆ ಹೆಣ್ಣೆಂಬರು
ಗಡ್ಡಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವ ಆತ್ಮ
ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥಾ

ಎಂದರೆ ಅಲ್ಲಮಪ್ರಭುದೇವರು

"ಹೆಣ್ಣು ಮಾಯೆಯಲ್ಲ ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯ" ಎಂದರು

ಅಲ್ಲಮನ ವಚನ ಸಿದ್ಧಾಂತವನ್ನೇ ಲಕ್ಷಿಟ್ಟಿಯವರು ತಮ್ಮ ಕವಿತೆಯ ಸಾಲುಗಳಲ್ಲಿ ಹೆಣ್ಣು

ಮಾಯೆಯಲ್ಲ ಜಗದ ಕಣ್ಣು ಎಂದು ಹೇಳುತ್ತಾ "ಹೆಣ್ಣು ಮಾಯೆಯಲ್ಲ" ಎಂಬ ಕವಿತೆಯಲ್ಲಿ -----

ಆಡದಿರು ಆಡದಿರು
ಎಂದಿಗೂ ಆಡದಿರು
ಹೆಣ್ಣು ಮಾಯೆಯೆಂದು
ಮರೆಯದಿರು
ಎಂದಿಗೂ ಮರೆಯದಿರು
ಜಗದೊಡೆಯ ನಾನೆಯೆಂದೂ

ಪ್ರಕೃತಿ ಶಕ್ತಿಯ ತತ್ತ್ವವಡಗಿದೆ. ಶಕ್ತಿಯಿಲ್ಲದ ಪುರುಷನಿಗೆ ಅಸ್ತಿತ್ವವಿಲ್ಲ.ಒಂದು ವೇಳೆ ಹೆಣ್ಣನ್ನು ಮಾಯೆಯೆಂದು ಜರಿದು, ಅಲಕ್ಷಿಸಿದಲ್ಲಿ ಈ ಪ್ರಪಂಚದ ಚಲನೆಯೇ ನಿಂತು ಹೋಗಬಹುದೆಂಬುದನ್ನು ಒಂದು ಹೆಜ್ಜೆ ಮುಂದೆ ಹೋಗಿ "ಹೆಣ್ಣು ಮಾಯೆಯಲ್ಲ" ಎಂಬ ಕವನದಲ್ಲಿ ಹೆಣ್ಣಿನ ಮಹತ್ವವನ್ನು ಚನ್ನಾಗಿ ಮೂಡಿಸಿದ ಕವಿ ಶ್ರೀ ಬಾಳೇಶ ಲಕ್ಷೆಟ್ಟಿ

ಜೀವನದ ಹಂಗು ತೊರೆದು ಹೋರಾಡುವ ಶಕ್ತಿ ಅವಳಲ್ಲಿ ಮಾತ್ರ ಇದೆ ಎಂದು ಲಕ್ಷೆಟ್ಟಿಯವರು ತಮ್ಮ ಕಾವ್ಯದಲ್ಲಿ ತೋರಿಸಿದ್ದಾರೆ.

ಹೆಣ್ಣು ಹೆಣ್ಣಲ್ಲ ಹೆಣ್ಣು ಸಾಹಸದ ವಿಜಯಲಕ್ಷಿ
ವೀರರಮಣಿಯರೆ ಇದಕೆ ಸಾಕ್ಷಿ!
ಹೆಣ್ಣುತನ ಬಿಸುಟೊಗೆದು ಗಂಡೆದೆಯೆ ತಾನಾಗಿ
ಕಾದು ಮಡಿದಳು ದೇವಿ
ಎನ್ನುವಲ್ಲಿ ಸ್ತ್ರೀ ಕುಲವನ್ನೇ ಉತ್ತುಂಗಕ್ಕೇರಿಸಿದ್ದಾರೆ.
ಅಂದಿನ ಆ ದಿನ ಇಂದಿಗೂ ಪಾವನ

ಅಂದಿನ ಕಾರ್ಯವು ಎಂದಿಗೂ ಮಾನ್ಯವು ಎಂಬುದರಲ್ಲಿ ಎರಡುಮಾತಿಲ್ಲ! ಎಲ್ಲಿ ವೀರರಸವು ಉಕ್ಕೇರಿ ಹರಿದು ಕಿತ್ತೂರು ಚೆನ್ನಮ್ಮ, ಝಾಂನ್ಸಿರಾಣಿ ಇವರಿಬ್ಬರೂ ಕಂಡ ಕನಸು ನನಸಾಗುವ ನಿಟ್ಟಿನಲ್ಲಿ ನಡೆದರು ಎಂದು ಹೆಮ್ಮೆಯಿಂದ ಹೇಳಿದ್ದಾರೆ. ಜಾನಪದ ಸಾಹಿತ್ಯದಲ್ಲಿ ಸ್ತ್ರೀಗೆ ಉನ್ನತ ಸ್ಥಾನ ಮಾನ ಕೊಟ್ಟಿದ್ದನ್ನು ಇಲ್ಲಿ ಸ್ಮರಿಸುವುದು ನಮ್ಮ ಕರ್ತವ್ಯವೆಂದು ಹೇಳಬಹುದು.

---

೪೪. ಕಾವ್ಯಚಿಂತನೆ – ಶ್ರೀಕಾಂತ ದಾನವಾಡ ಪು.೧೬

ಆದ್ಯರ ಅರವತ್ತು ವಚನಕ್ಕೆ

ದಣ್ಣಾಯಕರ ಇಪ್ಪತ್ತು ವಚನ

ದಣ್ಣಾಯಕರ ಇಪ್ಪತ್ತು ವಚನಕ್ಕೆ

ಪ್ರಭುದೇವರ ಹತ್ತು ವಚನ

ಪ್ರಭುದೇವರ ಹತ್ತು ವಚನಕ್ಕೆ

ಅಜಗಣ್ಣ ಐದು ವಚನ

ಅಜಗಣ್ಣನ ಐದು ವಚನಕ್ಕೆ

ಅಕ್ಕನ ಒಂದು ವಚನ ನಿರ್ವಚನ

ಅಕ್ಕನ ವ್ಯಕ್ತಿತ್ವವನ್ನು ಕುರಿತು ಚೆನ್ನಬಸವಣ್ಣನವರು ಇಲ್ಲಿ ಬಿಂಬಿಸಿದ್ದಾರೆ. ಹೆಣ್ಣು ಜಗದಕವಿ (ದೇವಿ), ವೈರಾಗ್ಯನಿಧಿ, ಕೋಟಿ ಹೆಂಗಳೆಯರಿಗಷ್ಟೇ ಅಲ್ಲ ಅವಳು ಪುರುಷ ವರ್ಗಕ್ಕೂ ಭಾಗ್ಯದೇವತೆಯಾಗಿ ತನ್ನ ಸರಳ ಸುಂದರವಾದ ವಚನಗಳಿಂದ ಕನ್ನಡ ನೆಲ, ಜಲ, ವನಸಿರಿ, ಪಕ್ಷಿ ಸಂಕುಲದಲ್ಲಿ ತನ್ನ ಇಷ್ಟದೇವನನ್ನು ಕಂಡ ಅಕ್ಕ ಕನ್ನಡದ ಕಂಪನ್ನು ದಿಗ್‌ದಿಗಂತಕ್ಕೆ ಸೂಸಿ ಕನ್ನಡಿಗರ ಬಾಳನ್ನು ಧನ್ಯಗೊಳಿಸಿದ್ದಾಳೆ, ಎಂದು ಲಕ್ಷೆಟ್ಟಿಯವರು ಹಾಡಿ ಹೊಗಳಿದ್ದಾರೆ.

"ಹೆಣ್ಣು ಕುಲ ಮೇಲೆತ್ತಿ ಹೆಣ್ಣು ಧರ್ಮವ ಸಾರಿ

ಸುಧೆಯ ಹರಿದಿಯಕ್ಕ ಹೆಣ್ಣು ಕುಲಜಲಧಿಯಲಿ

. . . . . . . . . . . . . . . . . . . . . . .

ಶರಣ ಸತಿಯರ ಪರಮ ಭಾಗ್ಯದೈಸಿರಿ ನೀನು

ನಿನ್ನ ಮಾರ್ಗವ ತುಳಿಯೆ ಜೀವನವು ಹಾಲ್ಜೇನು"

ಎನ್ನುವಲ್ಲಿ ಹೆಣ್ಣು ಕುಲವನ್ನೇ ಮೇಲಕ್ಕೆತ್ತಿ ಅವರು ಆಕಾಶದೆತ್ತರದ ಸಿಂಹಾಸನದ ಮೇಲೆ ಅಕ್ಕನನ್ನು ಕೂಡ್ರಿಸಿ ಪರಾಕಾಷ್ಟೆ ಮೆರೆದಿದ್ದಾರೆ.

ಬಾಳಗೆಳತಿ ಪದ್ಯದಲ್ಲಿ

ಹೆಣ್ಣು ಕುಟುಂಬದ ಕಣ್ಣು, ಹೆಣ್ಣು ಗಂಡು ಒಂದೇ ರಥದ ಎರಡು ಗಾಲಿಗಳಿದ್ದಂತೆ ಎನ್ನುವ ಹಾಗೆ ಮಲ್ಲಿಗೆಯ ಕಂಪು ಯಾವ ರೀತಿ ಪರಿಸರವನ್ನು ಸುಗಂಧಮಯವನ್ನಾಗಿ ಮಾಡುತ್ತದೆ ಹಾಗೆ ನೀನು ನನ್ನ ಜೀವನದ ಕಂಪು, ಎಲ್ಲಡೆ ಹರಡಲು ದು:ಖ, ದುಮ್ಮಾನ, ಚಿಂತೆಯನ್ನು ಬಿಟ್ಟು ಬಾಳಗೆಳತಿಗೆ ಹಾಡು ಹಾಡ ಬಾ ಎಂದು ಶೃಂಗಾರಮಯವಾಗಿ ಹಾಡುತ್ತ ಸ್ವಹಿತವನ್ನಷ್ಟೇ ಬಯಸದೆ ಸಮಷ್ಟಿಯ ಚಿಂತನೆಯನ್ನು ಮಾಡುವ ಲಕ್ಷೆಟ್ಟಿಯವರ

ವಿಚಾರ ಮೆಚ್ಚುವಂಥದ್ದು. ಪುರುಷನೊಬ್ಬನಿಂದ ಮಾಡಲು ಸಾಧ್ಯವಾಗದೇ ಇದ್ದದ್ದನ್ನು ಜೊತೆಗೂಡಿ ಮಾಡಿದರೆ ಖಂಡಿತವಾಗಿಯೂ ಯಶಸ್ಸು ದೊರೆಯುತ್ತದೆ ಎಂಬುದನ್ನು ಸಾಂಕೇತಿಕವಾಗಿ ಹೂ ಬಳಸಿ.

"ಬರಲಿಹ ಭಾಗ್ಯದ ದಿನಗಳ ಚಿತ್ರವು

ಹುವಿನೊಳಡಗಿಯದು

ನಾಳಿನ ನಾಡಿನ ಜೀವನವೆಲ್ಲವು

ನಮ್ಮನೆ ಕೂಡಿಹುದು"

ಹೆಣ್ಣಿಲ್ಲದಿದ್ದರೆ ಜೀವನವೇ ಬರಡು ಎನ್ನುವುದು ಲಕ್ಷೆಟ್ಟಿಯವರ ಕವಿತೆಯಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

ಕೆಲವೊಂದು ಶ್ರೀಮಂತ ವರ್ಗದ ಪುರುಷರು ಹೆಣ್ಣಿನ ಅಂದಚೆಂದ ಮೈ ಮಾಟಕೆ ಮರುಳಾಗಿ ತಮ್ಮ ಸಂಪತ್ತು, ಸರ್ವಸ್ವವನ್ನು ಅವರಿಗೆ ಧಾರೆ ಎರೆದು ಕ್ಷಣಿಕ ಸುಖಕ್ಕಾಗಿ ಜೀವನವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಹೆಣ್ಣಿನ ಬಗ್ಗೆ ಅವರಿಗೆ ಎಳ್ಳಷ್ಟು ಕರುಣೆ ಇರುವುದಿಲ್ಲ. ಕಾಮಾಂಧರಾಗಿ ತನ್ನತನವನ್ನು ಕಳೆದುಕೊಳ್ಳುವವರೆಗೆ, ದೀನದಲಿತರು, ನಿರ್ಗತಿಕರು, ಬಡವರು ಕಣ್ಣಿಗೆ ಗೋಚರಿಸುವದಿಲ್ಲವೆಂದು ಕವಿ ಹೃದಯ ಇಲ್ಲಿ ಮಿಡಿಯುತ್ತಿರುವುದನ್ನು ಕಾಣುತ್ತೇವೆ.

ಹೆಣ್ಣು ಬರಿ ಹೆಣ್ಣಲ್ಲ ಮಾನಾಭಿಮಾನ ಸಿಂಧು

ಆಂಗ್ಲ ಹುಚ್ಚು ನೀತಿಗೆ, ಬಿಚ್ಚುಗತ್ತಿಯ ಹಿರಿದ

ಝಾಂಸಿರಾಣಿ ಮೇಣ್ ಕಿತ್ತೂರರಾಣಿ

ವೀರ ಸ್ವರ್ಗವ ನೇರಿ ಸಾರಿದರು ಧ್ಯೇಯವಾಣಿ-

ಎಮದು ಹೆಣ್ಣಿನ ಕುರಿತು ಕವಿಗೆ ಅಭಿಮಾನವಿದೆ.

ಇಲ್ಲಿ ಕವಿ ಕಾಶ್ಮೀರ ಭಾರತದ ಅವಿಭಾಜ್ಯ ಅಂಗ ಕಾಶ್ಮೀರ ಎನ್ನುವ ಈ ಸುಂದರ ಮಾನಿನಿಯ ಮೇಲೆ ಶತ್ರುಗಳ ಕಣ್ಣು ಬಿದ್ದಾಗ ಆಂಗ್ಲರ ದಬ್ಬಾಳಿಕೆಯನ್ನು ಬಗ್ಗು ಬಡಿಯಲು ಸಿದ್ಧಗೊಳ್ಳುವ ಸಂದರ್ಭವಿದು. ಭಾರತೀಯ ಹೆಣ್ಣುಮಕ್ಕಳು ಯಾವುದರಲ್ಲಿಯೂ ಕಡಿಮೆ

---

೪೫. ಕಾವ್ಯ ಚಿಂತನೆ - ಶ್ರೀಕಾಂತ ಕಾನವಾಡ ಪು.೧೬

೪೬. ಅನಾವರಣ- (ಡಾ.ಲ.ಅಮೃತ ಮಹೋತ್ಸವ ಅ.ಗ್ರ) ಸಂ.ಪ್ರೊ.ಎಲ್.ವಿ.ಪಾಟೀಲ ಪು.೪೬

ಇಲ್ಲವೆನ್ನುವ ಹಾಗೆ ಸ್ವಾಭಿಮಾನದಿಂದ ದೇಶಕ್ಕಾಗಿ ಹೋರಾಡುವಲ್ಲಿ ತಮ್ಮ ದಿಟ್ಟತನವನ್ನು ತೋರಿದ್ದಾರೆ. ಅದಕ್ಕೇಂದೇ ಕವಿ ಈ ಮೆಲಿನ ಪದ್ಯ ಹಾಡಿ, ಹೊಗಳಿ ಭಾರತ ನಾರಿಯರ ಶೌರ್ಯ ಸಾಹಸವನ್ನು ಕವಿತೆಯ ಸಾಲುಗಳ ಮುಖಾಂತರ ಜನರಿಗೆ ತೋರಪಡಿಸಿದ್ದಾರೆ.

ಶ್ರೀ ಬಾಳೇಶ ಲಕ್ಷೆಟ್ಟಿಯವರು ಸರಳಜೀವಿ, ಸ್ನೇಹಜೀವಿ, ಅಜಾತಶತ್ರು, ಅವರ ದೃಷ್ಠಿಯಿಂದ ಕಾವ್ಯದ ಸೃಷ್ಠಿಯಾಗಿದೆ ಎಂದು ಹೇಳಬಹುದು. ಒಂದಿಲ್ಲೊಂದು ರೀತಿಯಲ್ಲಿ ಮಹಿಳೆಯ ಕುರಿತು ಉದಾತ್ತ ಭಾವನೆಗಳನ್ನಿಟ್ಟುಕೊಂಡು ತಮ್ಮ ಅನಿಸಿಕೆಗಳನ್ನು ಸಂವೇದನೆಯನ್ನು ತಮ್ಮ ಪದ್ಯಗಳಲ್ಲಿ ಪ್ರತಿಬಿಂಬಿಸಿದ್ದಾರೆ.

## ಅಧ್ಯಾಯ-ಐದು

## ಸಮಾರೋಪ

ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವು ಇಂದು ಶ್ರೀಮಂತವಾಗಿ ಬೆಳೆದು ನಿಂತಿದೆ. ಇದಕ್ಕೆಲ್ಲ ಕಾರಣ ಆಧುನಿಕ ಕನ್ನಡ ಸಾಹಿತ್ಯದಲ್ಲಾದ ಬದಲಾವಣೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ, ಬಂಡಾಯೇತರ ಕಾಲಘಟ್ಟಗಳಲ್ಲಿ ಹುಟ್ಟಿಕೊಂಡ ಹಲವಾರು ಸಾಹಿತ್ಯ ಪ್ರಕಾರಗಳು, ಜನ ಜೀವನದಲ್ಲಿ ಹಲವಾರು ಬದಲಾವಣೆಗಳನ್ನು ತಂದು ಜನಮಾನಸವನ್ನು ತಮ್ಮತ್ತ ಸೆಳೆದುಕೊಂಡವು.

ಕಥೆ, ಕಾದಂಬರಿ, ಪ್ರವಾಸ ಕಥನ, ನಾಟಕ, ಪ್ರಬಂಧ ಇತ್ಯಾದಿ ಸಾಹಿತ್ಯ ಪ್ರಕಾರಗಳು ಗದ್ಯ ಸಾಹಿತ್ಯ ಪ್ರಕಾರಗಳಾಗಿವೆ. ಇವು ದೀರ್ಘ ಸಮಯವನ್ನು ಬಯಸುವುದು ಸಾಮಾನ್ಯ ಯಾಕೆಂದರೆ ಇಲ್ಲಿ ಯಾವುದೇ ಬಗೆಯ ಗೇಯತೆ ಇರದೆ ಉದ್ದಕ್ಕೂ ಓದಿಕೊಂಡು ಸಾಗಬೇಕಾಗುತ್ತದೆ. ಆಗ ಆತ ಕಡಿಮೆ ಸಮಯದಲ್ಲಿ ಥ್ರೀಲ್ ಕೊಡುವ ಸಾಹಿತ್ಯದ ಹುಡುಕಾಟಕ್ಕೆ ನಿಲ್ಲುತ್ತಾನೆ. ಅಂಥ ಸಂದರ್ಭದಲ್ಲಿ ಎದುರುಗೊಳ್ಳುವ ಕಾವ್ಯ ಪ್ರಕಾರ ಓದುಗನನ್ನು ತನ್ನತ್ತ ಸೆಳೆದುಕೊಳ್ಳುತ್ತದೆ. ಕಾವ್ಯ ಪ್ರಕಾರಗಳಾದ ಜಾನಪದ, ಭಾವಗೀತೆ, ವಚನ, ಕೀರ್ತನೆಗಳು, ಗೇಯತೆಯನ್ನು ಹೊಂದಿದ್ದು ಕಡಿಮೆ ಅವಧಿಯಲ್ಲಿ ಒಂದು ಸನ್ನಿವೇಶದ ಪರಿಣಾಮವನ್ನು ತಿಳಿಸಿಕೊಡುತ್ತವೆ. ಇದನ್ನು ಮನಗಂಡ ಸಾಹಿತಿಗಳು ಕಾಲಕ್ಕೆ ತಕ್ಕಂತೆ ಹೊಸದನ್ನು ಕಟ್ಟಿಕೊಡಲು ಹವಣಿಸಿದರು. ಹೀಗೆ ಹೊಸತನವನ್ನು ಕಟ್ಟಿಕೊಡಲು ಮುಂದಾದಾಗ ಹುಟ್ಟಿಕೊಂಡದ್ದು ಜಾನಪದ ತ್ರಿಪದಿ, ಕಂದ, ಸಂಸ್ಕೃತದ ಮುಕ್ತಕಗಳು, ಸರ್ವಜ್ಞನ ವಚನಗಳು, ದಾಸರ ಪದಗಳು, ಶಿವಶರಣರ ವಚನಗಳು, ಮತ್ತು ಕವಿಗಳಲ್ಲಿ ಕಾವ್ಯಗಳು ಹುಟ್ಟಿಕೊಂಡವು. ಈ ದಾರಿಯನ್ನು ಅನುಸರಿಸಿ ಬಾಳೇಶ ಲಕ್ಷೆಟ್ಟಿಯವರು ಕಾವ್ಯ ಸಾಹಿತ್ಯಕ್ಕೆ ಚಾಲನೆ ನೀಡಿದರು. ಸಾಹಿತ್ಯ ಚರಿತ್ರೆಯಲ್ಲಿ ತಮ್ಮ ಸ್ಥಾನ ಭದ್ರಪಡಿಸಿಕೊಂಡರು.

ಲಕ್ಷೆಟ್ಟಿಯವರು ಸಮಾಜದ ಅನಿಷ್ಟ, ಅನೀತಿ, ಅನ್ಯಾಯಗಳನ್ನು ತಮ್ಮ ಕಾವ್ಯಗಳ ಮೂಲಕ ಖಂಡಿಸಿದ್ದನ್ನು ತೋರಿಸಿಕೊಟ್ಟರು. ಇವರು ಕವಿತೆಯ ಸಾಲುಗಳು ಪ್ರಾಸಬದ್ಧವಾಗಿದ್ದರೂ, ಅರ್ಥ ಬದ್ಧತೆಯಿಂದ ಕೂಡಿವೆ. ಲಕ್ಷೆಟ್ಟಿಯವರ ಕವನದ

ಸಾಲುಗಳಲ್ಲಿ ಪ್ರಾಸಕ್ಕಿಂತ ವಿಷಯ ವಸ್ತುವಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆ. "ಪ್ರಾಸವಿಲ್ಲದಪದ ತಾಸು ಹಾಡಿದರೇನು" ಎನ್ನುವುದೊಂದು ವಾಡಿಕೆ. ಆದರೆ "ಅರ್ಥವಿಲ್ಲದ ಪದ ಎಷ್ಟು ಸಾಲು ಬರೆದರೆ ಅರ್ಥ ಬರುವುದೆ". ಎಂದು ಹೇಳಿದರೆ ತಪ್ಪಾಗದು. ಇಂದು ಪ್ರಾಸಕ್ಕಾಗಿ ತಿನುಕಾಡುವ ಕವಿಗಳೇ ಬಹಳಷ್ಟು, ಆದರೆ ಅರ್ಥಕ್ಕಾಗಿ ತಿನುಕಾಡುವವರು ಲಕ್ಷೆಟ್ಟಿಯಂಥ ಕವಿಗಳು ಮಾತ್ರ. ಇವರ ಕಾವ್ಯ ಸತ್ಯಕ್ಕೆ ಸಮೀಪವಾದುದು. ಯಾರ ಹಂಗಿಗೆ ಒಳಗಾಗದೆ ಕ್ರಾಂತಿಕವಿ 'ಹರಿಹರ' ನಂತೆ ನೇರ–ದಿಟ್ಟ–ನಿರಂತರ ಕಾವ್ಯ ರಚಿಸುವ ಸಾಮರ್ಥ್ಯ ಇವರದು.

ಲಕ್ಷೆಟ್ಟಿಯವರ ಕಾವ್ಯ ಸಮಯ ಸಹೃದಯರನ್ನು ಮನಸಿನಲ್ಲಿಟ್ಟುಕೊಂಡು ರಚನೆಯಾದದ್ದು. ತಮ್ಮ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು ಇದ್ದದ್ದು ಇದ್ದಂತೆ ಹೇಳುವ ಕೌಶಲ್ಯ ಇವರದು. ಇವರು ಸಮಾಜದಲ್ಲಿ ಬದುಕುವ ರೀತಿ ಹಾಗೂ ಸಮಾಜದ ವಿಡಂಬನೆಗಳನ್ನು ತಮ್ಮ ಕಾವ್ಯದಲ್ಲಿ ಮೂಡಿಸಿದ್ದಾರೆ.

ಲಕ್ಷೆಟ್ಟಿ ತನ್ನ ಕಾವ್ಯ ಎಲ್ಲರಿಗೂ ಪ್ರೀಯವಾಗಲೆಂದು ಜನಸಾಮಾನ್ಯರನ್ನು ಕೇಂದ್ರವಾಗಿಟ್ಟುಕೊಂಡು ಜನಪದ ಸೊಗಡಿನಲ್ಲಿ ಕಾವ್ಯ ರಚಿಸಿದ್ದಾರೆ. ಜನಸಾಮಾನ್ಯರು ಆಡು ಮಾತಿನಲ್ಲಿ ಬಳಸುವ ಗಾದೆ ಮಾತುಗಳನ್ನು, ಅನುಕರಣ ಪದಗಳು, ಪುನರುಕ್ತಿಗಳನ್ನು, ವಿಶೇಷ ಪದಗಳನ್ನು ಬಳಸಿರುವುದು ಲಕ್ಷೆಟ್ಟಿಯವರ ಕಾವ್ಯ ಶೈಲಿಯ ವಿಶೇಷತೆಯನ್ನು ಎತ್ತಿ ಹಿಡಿಯುತ್ತದೆ. ಈ ಎಲ್ಲಾ ಅಂಶಗಳನ್ನು ಕಾವ್ಯದಲ್ಲಿ ತರುವುದರ ಮೂಲಕ ಕನ್ನಡದ ಕಂಪನ್ನು ಹೆಚ್ಚಿಸಿರುವುದಲ್ಲದೆ ಪದಪುಂಜವನ್ನು ಪರಿಣಾಮಕಾರಿಯಾಗಿ ಬಳಸಿ, 'ಸವಿಗನ್ನಡದ ಸಾಹಿತ್ಯ ಸಿರಿ'ಯನ್ನು ಬೆಳಗಿ ಬೆಳೆಸಿದ ಕವಿ ಬಾಳೇಶ. ಅಚ್ಚಗನ್ನಡದ ನುಡಿಗಳನ್ನು ಬಳಸುವುದರ ಮೂಲಕ ದೇಸೀ ಗೌರವವನ್ನು ಉನ್ನತ ಮಟ್ಟಕ್ಕೇರಿಸಿದ ಶ್ರೇಯಸ್ಸು ಲಕ್ಷೆಟ್ಟಿಯವರದು. ಕವಿ ಸರಳ, ಸಜ್ಜನನಾದಂತೆ, ಅಷ್ಟೇ ಅವನ ಕವಿತೆಯ ಸಾಲುಗಳು ಸರಳ, ಸುಂದರವಾಗಿ ಮೂಡಿಬಂದಿವೆ". "ಸೃಜನಶೀಲ ಬರವಣಿಗೆಯಲ್ಲಿ ಬಾಳೇಶ ಲಕ್ಷೆಟ್ಟಿಯವರ ಲೇಖನಿ ಪಳಗಿದೆ. ಒಳ್ಳೆಯ ಲೇಖಕರೆಂದು ಕೀರ್ತಿಶಾಲಿ"ಗಳಾಗಿದ್ದಾರೆ. ಡಾ. ಹಂಪನಾರವರು ಲಕ್ಷೆಟ್ಟಿಯವರನ್ನು ಕುರಿತು ಹೇಳಿರುವ ಮಾತು ಸತ್ಯ.

ಸಂಶೋಧನೆ ಎಂಬುದು ಹುಡುಕು, ಹೊಸದನ್ನು ಹುಡುಕು, ಈಗಾಗಲೇ ಇದ್ದು ಮರೆಯಾಗಿರುವುದನ್ನು ತೆರೆದು ತೋರಿಸು ಎನ್ನುವ ಅರ್ಥವನ್ನು ಹೊಂದಿದೆ. ಆದ್ದರಿಂದ ಈಗಾಗಲೇ ಇರುವ, ಬೆಳಕಿಗೆ ಬಾರದೆ ಇರುವ ಕವಿಗಳ ಸಾಲಿನಲ್ಲಿ ಮರೆಯಾದ

ಲಕ್ಷೆಟ್ಟಿಯವರೂ ಒಬ್ಬರು. ಇವರ ಸಾಹಿತ್ಯ ಕೃಷಿ ಹೇರಳವಾಗಿದ್ದರೂ ಸಾಹಿತ್ಯ ವಲಯಕ್ಕೆ ಮಾತ್ರ ಎಲೆಯ ಮರದಲ್ಲಿದ್ದು ಕೂಗುವ ಕೋಗಿಲೆ ಆಗಿದ್ದಾರೆ. ಲಕ್ಷೆಟ್ಟಿಯವರು ವೃತ್ತಿಯಲ್ಲಿ ಶಿಕ್ಷಕರಾಗಿದ್ದರೂ ಪ್ರವೃತ್ತಿಯಲ್ಲಿ ಕವಿ. ಕವಿಯಾಗಿ ಇವರು ಸಮಾಜದ ಜನ ಹೇಗೆ ಇರುವವರು, ಇಂದಿನ ಯುವ ಪೀಳಿಗೆ ಸ್ನೇಹಕ್ಕೆ ಎಷ್ಟು ಬೆಲೆಕೊಡುವವರು ಎಂಬುದನ್ನು 'ನಾ' 'ಇಲ್ಲದಿದ್ದಾಗ ' ಎಂಬವರ ಹದಿನಾಲ್ಕನೇ ಕವನ ಸಂಕಲನದ 'ಸ್ನೇಹ ಸಂಬಂಧ' ಕವಿತೆಯಲ್ಲಿ ಹೀಗೆ ಹೇಳಿದ್ದಾರೆ.

ಹೊರಗೆ ಕೊರಳಿಗೆ ಹೂಹಾರ ಹಾಕಿ
ಒಳಗೆ ಕೊರಳ ಕೊಯ್ಯು ಜನರ ನಡುವೆ
ನಾನೊಂದು ಮಾತು ಬಾರದ ಪ್ರಾಣಿಯಾಗುತ್ತೇನೆ
ಇದುವರೆಗೆ ಜತೆಗಿದ್ದವರೊಬ್ಬರೂ ಇಲ್ಲದಾಗುತ್ತಾರೆ;
ಸ್ಮಶಾನ ಕಿಚ್ಚಿನ ಮಧ್ಯೆ ಏಕಾಂಗಿಯಾಗಿ
ಮೌನಿಯಾಗುತ್ತೇನೆ.
ಅಲ್ಲಿಯೂ ಬಂದಿವರು,
ಪ್ರತಿದಾಳಿಯಿಡುತ್ತಾರೆ!
ಇವರ ಕರುಳ ಬಳ್ಳಿಗಳ ಕಿತ್ತು
ಮುಡಿದ ಹೂವುಗಳ ಹೊಸಕಿದೆನೆ?
ಇಲ್ಲವಲ್ಲ!
ಬಂದೂಕು ತುದಿಯಲ್ಲಿ
ಪ್ರೀತಿಯನೆ ಬೆಸೆದೆನಲ್ಲ!
ಮತ್ತೆ ಕಾಡುವುದು ಸ್ನೇಹ ಸಂಬಂಧ
ಮುಳ್ಳು ಮೊನೆಯಾಗಿ
ಒಂದೆ ತಟ್ಟೆಯಲಿ ಉಂಡವರಿವರು
ಅದೇ ತಟ್ಟೆಯಲ್ಲೇಕೆ ಇವರ ಹೊಲಸು!!

ಎನ್ನುವಲ್ಲಿ ಸ್ನೇಹ ಸಂಬಂಧವನ್ನು ಕುರಿತು ಹೇಳಿದ್ದಾರೆ. ಹೀಗೆ ಬಾಳೇಶ ಲಕ್ಷೆಟ್ಟಿಯವರ ಕವಿತೆಗಳು ಹಿಂದೆನುಸ್ಯೆ, ಇಂದುಸ್ಯೆ, ಮುಂದೆನುಸ್ಯೆ "ಸಮಾಜವೆಂಬ ಸಾಗರದಲ್ಲಿ ನಿರಂತರವಾಗಿ ತೇಲಾಡುವ ದೋಣಿ" ಇವರ ಕವಿತೆಯ ಸಾಲುಗಳು. ಲಕ್ಷೆಟ್ಟಿಯವರ

೪೭. 'ನಾ' ಇಲ್ಲದಿದ್ದಾಗ– ಬಾಳೇಶ ಲಕ್ಷೆಟ್ಟಿ ಇವರ ಕವನ ಸಂಕಲನ (೧೪)ಪು.೨

ಕವನಗಳನ್ನು ಲಕ್ಷಿಸಿದರೆ, "ಇವರು ಸಂಪೂರ್ಣ ರೋಮ್ಯಾಂಟಿಕ್ ಸಂಪ್ರದಾಯದವರು. ಇವರ ಕವನಗಳಲೆಲ್ಲ ಕಂಡುಕೊಳ್ಳುವ ಮುಖ್ಯ ಗುಣ.ಅನುಕಂಪ, ಕರುಣೆ ಕಾವ್ಯ ಕೃಷಿಯಲ್ಲಿ ನಿರತರಾದ ಕೆಲವೇ ಕೆಲವು ಶ್ರದ್ಧಾವಂತ ಕವಿಗಳಲ್ಲಿ ಲಕ್ಷೆಟ್ಟಿಯವರೊಬ್ಬರು. ಇವರ ಕಾವ್ಯದಲ್ಲಿ ಅನುಭವದ ತೀವ್ರತೆ ಇದೆ. ನೈಜಭಾವ ಸೌಂದರ್ಯವಿದೆ. ಲೋಕಾನುಭವದ ತಿರುಳಿದೆ"ಎಂದು ಡಾ. ಸೋಮಶೇಖರ ಇಮ್ರಾಪೂರ ಹೇಳುವ ಮಾತು ಲಕ್ಷೆಟ್ಟಿಯವರ ಕಾವ್ಯದ ವಸ್ತು, ಸ್ಥಿತಿ, ಶೈಲಿ, ರೀತಿ-ನೀತಿ ಹಾಗೂ ರಸಾನುಭವದ ರಸವತ್ತತೆಯನ್ನು ಹೇಳುವಲ್ಲಿ ಸಾಕ್ಷಿಯಾಗಿದೆ.

ಲಕ್ಷೆಟ್ಟಿಯವರ ಬದುಕು-ಬರಹವನ್ನು ಈ ಸಂಪ್ರಬಂಧದಲ್ಲಿ ಹೇಳುವ ಮೂಲಕ ಯುವ ಸಾಹಿತಿಗಳಿಗೆ ಸ್ಫೂರ್ತಿ ತುಂಬುವ ಉದ್ದೇಶ ಹೊಂದಿ ಅಧ್ಯಯನ ಕೈಗೊಳ್ಳಲಾಗಿದೆ.

"ಬೆಳೆಯುವ ಸಿರಿ ಮೊಳಕೆಯಲ್ಲಿ ಕಾಣು"- ಎನ್ನುವಂತೆ ಬಾಲ್ಯದ ಪರಿಸರ ಪ್ರೇರಣೆಯಿಂದ ಕೂಡಿದ್ದರೆ ಒಬ್ಬ ವ್ಯಕ್ತಿಯೊಳಗಿನ ಪ್ರತಿಭೆ ಹೂವಾಗಿ ಅರಳುವುದು ಎನ್ನುವುದಕ್ಕೆ ಕವಿ ಬಾಳೇಶ ಲಕ್ಷೆಟ್ಟಿಯವರೇ ಜೀವಂತ ಸಾಕ್ಷಿ. ಇವರು ವಿದ್ಯಾರ್ಥಿಯಾಗಿದ್ದಾಗಲೇ ಶಿಕ್ಷಕರು ಇವರ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುತ್ತಿದ್ದರು. ಅದುವೇ ಮುಂದೆ ಅವರೊಬ್ಬ ಕವಿಯಾಗಿ, ಕಥೆಗಾರರಾಗಿ, ನಾಟಕಕಾರರಾಗಿ, ರೂಪಗೊಳ್ಳುವಲ್ಲಿ ಸಹಾಯಕವಾಯಿತು. ಆದ್ದರಿಂದ ಬಾಲ್ಯದ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಿ ಎಂಬ ಉದ್ದೇಶದಿಂದ ಇವರ ಬದುಕನ್ನು ಕುರಿತು ಹೇಳಲಾಗಿದೆ.

ಒಬ್ಬ ಜನಸಾಮಾನ್ಯನಂತೆ ಬದುಕುತ್ತಿರುವ ಇವರ ಜೀವನ ಶೈಲಿ ಅನುಕರಣೀಯವಾದದ್ದು- "ಜ್ಞಾನದ ಶ್ರೀಮಂತಿಕೆ ಇರಬೇಕೆ ಹೊರತು ಹಣದ ಶ್ರೀಮಂತಿಕೆಯಲ್ಲ"- ಎನ್ನುತ್ತಾರೆ. ಒಬ್ಬ ವ್ಯಕ್ತಿಯ ಜೀವನ ಶೈಲಿ ಹೇಗೆಯಿರಬೇಕು ಎಂಬುದನ್ನು ತಿಳಿಸುವ ಉದ್ದೇಶವಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ ಮತ್ತು ಅಧ್ಯಯನದ ಫಲಿತವನ್ನು ಹೇಳಲಾಗಿದೆ.

'ಬಾಳೇಶ ಲಕ್ಷೆಟ್ಟಿಯವರ ಕಾವ್ಯ ವಿವೇಚನೆ' ಎಂಬ ಶೀರ್ಷಿಕೆಯನ್ನಿಟ್ಟುಕೊಂಡು ಸಂಪ್ರಬಂಧ ರಚನೆ ಮಾಡಿ ಲಕ್ಷೆಟ್ಟಿಯವರ ಆದರ್ಶ ವ್ಯಕ್ತಿತ್ವವನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸುವಾಗ, ಅದರಿಂದ ದೊರೆತ ಫಲಿತಗಳು ಸಾಕಷ್ಟಿವೆ. ಅವುಗಳನ್ನು ಪಟ್ಟಿ ಮಾಡುವುದಾದರೆ-

- ಲಕ್ಷೆಟ್ಟಿಯವರ ಕಾವ್ಯ ಬರವಣಿಗೆಯ ರೀತಿ, ಶೈಲಿ, ಮಾರ್ಗವನ್ನು ತಿಳಿಯಲಾಗುತ್ತದೆ.

- ಲಕ್ಷೆಟ್ಟಿಯವರ ಕವನ ಸಂಗ್ರಹಗಳು ಹರಿದು ಹಂಚಿಹೋಗಿದ್ದ ಕವಿತೆಗಳನ್ನು ಸಾಧ್ಯವಾದಷ್ಟು ಒಂದು ಕಡೆ ಸಂಗ್ರಹಿಸಲಾಗಿದೆ.
- ಲಕ್ಷೆಟ್ಟಿಯವರ ಕಾವ್ಯದೊಳಗಿನ ವಸ್ತು ಮತ್ತು ವೈಶಿಷ್ಟ್ಯಗಳನ್ನು ಗುರುತಿಸಲಾಗಿದೆ.
- ಸಾಹಿತ್ಯಾಭ್ಯಾಸಿಗಳಿಗೆ ಲಕ್ಷೆಟ್ಟಿಯವರ ವ್ಯಕ್ತಿತ್ವ ಮತ್ತು ಸಾಹಿತ್ಯ ಕೃಷಿಯನ್ನು ಪರಿಚಯಿಸಲಾಗಿದೆ.
- ಲಕ್ಷೆಟ್ಟಿಯವರ ಕಾವ್ಯ ಸಾಹಿತ್ಯವಲ್ಲದೆ, ಕಥೆ, ಕಾದಂಬರಿ, ನಾಟಕ, ಅಂಕಣಸಾಹಿತ್ಯ, ವ್ಯಕ್ತಿ ಚಿತ್ರಣ, ಸಂಪಾದನೆ, ಪತ್ರ ಸಾಹಿತ್ಯ, ಸಂಕೀರ್ಣ ಇತ್ಯಾದಿ ಇವರ ಸಾಹಿತ್ಯ ಸೇವೆಯನ್ನು ಪರಿಚಯಿಸಲಾಗಿದೆ.
- ಲಕ್ಷೆಟ್ಟಿಯವರ ಕಾವ್ಯ ಸಮಾಜದ ಮೇಲೆ ಬೀರುವ ಪರಿಣಾಮವನ್ನು ವಿವರಿಸಲಾಗಿದೆ.
- ಲಕ್ಷೆಟ್ಟಿಯವರು ವೃತ್ತಿಯಲ್ಲಿ ಅಧ್ಯಾಪಕರಾಗಿ, ಪ್ರವೃತ್ತಿಯಲ್ಲಿ ಕವಿಯಾಗಿ ಸದಾ ಹಸನ್ಮುಖಿಯಾಗಿ ಒಬ್ಬ ಸಾಧಾರಣ ವ್ಯಕ್ತಿಯಾಗಿ ಬದುಕುವ ಇವರ ಜೀವನ ಶೈಲಿ ಅಚ್ಚರಿ; ಆದರ್ಶನೀಯ.
- ಲಕ್ಷೆಟ್ಟಿಯವರ ಸಾಹಿತ್ಯ ಯುವಸಾಹಿತಿಗಳಿಗೆ ಸ್ಫೂರ್ತಿಯ ಚಿಲುಮೆಯಾಗಿ-ರುವುದನ್ನು ತಿಳಿಯಲಾಗಿದೆ.
- ಕವಿ, ನಾಟಕಕಾರ, ಕಥೆಗಾರ, ಸಂಘಟನಕಾರರಾದ ಬಾಳೇಶ ಲಕ್ಷೆಟ್ಟಿಯವರು ಬಹುಮುಖ ಪ್ರತಿಭೆಯನ್ನು ತಿಳಿಸಲಾಗಿದೆ.

ಹೀಗೆ ಹಲವಾರು ಫಲಿತಗಳು ಈ ಸಂಶೋಧನಾ ಸಂಪ್ರಬಂಧ ರಚನೆಯಿಂದಾಗಿ ದೊರೆಯುತ್ತವೆ.

ಸಂಶೋಧನೆಯು ನಿರಂತರ ಪರಿಶ್ರಮವನ್ನು ಬಯಸುತ್ತದೆ. ಇಂಥ ನಿರಂತರ ಪರಿಶ್ರಮ ಲಕ್ಷೆಟ್ಟಿಯವರ ಸಾಹಿತ್ಯ ಸೃಷ್ಟಿಯಲ್ಲಿ ಎದ್ದುಕಾಣುತ್ತದೆ.

ಒಟ್ಟಿನಲ್ಲಿ ಬಾಳೇಶ ಲಕ್ಷೆಟ್ಟಿಯವರು ಕಾವ್ಯಕೃಷಿಯನ್ನು ಮುಂದುವರಿಕೆಯ ಪ್ರತಿನಿಧಿಯಾಗಿ ನಿಂತು, ಆ ಸಾಹಿತ್ಯಕ್ಕೆ ಒಂದು ನೆಲೆ-ಬೆಲೆಯನ್ನು ತಂದುಕೊಡಲು ಶ್ರಮಿಸುತ್ತಿರುವ ಈ ಜೀವ ನಿಜಕ್ಕೂ ಅಸಾಧಾರಣವಾದದು. ಇವರ ಬದುಕು ಬರಹ

ಸಾಹಿತ್ಯ ಕ್ಷೇತ್ರಕ್ಕೆ ಪ್ರಜ್ವಲತೆಯ ಜ್ಯೋತಿಯಾಗಿದೆಂದರೆ ಸಂಶಯವಿಲ್ಲ. ಡಾ. ಸಿಂಪಿ ಲಿಂಗಣ್ಣ ಅಭಿವ್ಯಕ್ತ ಪಡಿಸಿದ ಬಗೆ ಹೀಗೆ–

"ಬಾಳೇಶರು ಉಲುಯಿಲ್ಲದ ಶಿಕ್ಷಕರು, ಸದ್ದಿಲ್ಲದ ಸಾಹಿತಿಗಳು,
ಮಧುರ ಕೌಶಲ ಮಾಯೆಯಲಿ ಮಾಡೆನ್ನ ಪ್ರೇಮಸಾಗರಾ"

ಎಂದು ಬಾಳೇಶರ ವ್ಯಕ್ತಿತ್ವವನ್ನು ಅರುಹಿದ್ದಾರೆ. ಈ ಹೇಳಿಕೆ ಲಕ್ಷೆಟ್ಟಿಯವರ ವ್ಯಕ್ತಿತ್ವಕ್ಕೂ ಸಾಹಿತ್ಯ ಸೇವೆಗೂ ಹಿಡಿದ ಕನ್ನಡಿಯಾಗಿದೆ.

ಲಕ್ಷೆಟ್ಟಿಯವರ ಕವಿತೆಯ ಸಾಲುಗಳು ಯುವಕರಿಗು, ಸಮಾಜದ ವಿಡಂಬನೆಗೂ ಅನೈತಿಕ, ಅನಿಷ್ಠ ಪದ್ಧತಿಗಳನ್ನು ಹೋಗಲಾಡಿಸುವಲ್ಲಿ ದಿಕ್ಸೂಚಿಯಂತೆ ದಾರಿತೋರಬಲ್ಲವು. ಇವರ ಕವಿತೆಗಳು ಹಿಂದು–ಮುಂದು–ಎಂದು ಸದಾ ನಿರಂತರವಾಗಿ ನಿಲ್ಲುವಂತವು. ವರಕವಿ ಬೇಂದ್ರೆ, ಚುಟುಕಗಳ ಬ್ರಹ್ಮ ದಿನಕರ ದೇಸಾಯಿ, ಬೆಟಗೇರಿ ಕೃಷ್ಣ ಶರ್ಮಾ, ಜ್ಞಾನಪೀಠ ವಿಜೇತ ಚಂದ್ರಶೇಖರ ಕಂಬಾರ ಹಾಗೂ ಚಂದ್ರಕಾಂತ ಕುಸನೂರ ಇವರುಗಳ ಕವಿತೆಯ ಸಾಲುಗಳು ಜೀವಂತಿಕೆ ಪಡೆದಂತೆ, ಲಕ್ಷೆಟ್ಟಿಯವರ ಕವಿತೆಯ ಸಾಲುಗಳು ನಿರಂತರವಾಗಿ ಸಮಾಜದ ಏಳಿಗೆಯನ್ನು ಬಯಸುವಲ್ಲಿ ಶ್ರಮಿಸುತ್ತಿರುವುದೊಂದು ವೈಶಿಷ್ಟ್ಯ.

ಒಬ್ಬ ಕವಿ, ಕಥೆಗಾರ, ನಾಟಕಕಾರ, ಸಂಘಟನಾಕಾರ, ಸಮಾಜ–ಸೇವಾಕರ್ತ, ಸರಳ ಸಜ್ಜನಿಕೆಯ ಕವಿಯಾಗಿರುವ ಬಹುಮುಖ ವ್ಯಕ್ತಿತ್ವದ ಲಕ್ಷೆಟ್ಟಿಯವರನ್ನು ಗುರುತಿಸಿ, ಅವರಿಗೆ ಸಲ್ಲಬೇಕಾದ ಗೌರವವನ್ನು ಸಾಹಿತ್ಯ ವಲಯ ಮತ್ತು ಸರ್ಕಾರ ಸಲ್ಲಿಸಲಿ ಎಂಬುದೇ ಈ ಸಂಪ್ರಬಂಧದ ಸದಾಶಯ.

## ಲಕ್ಷ್ಮಿಯವರ ಬದುಕಿನ ಮಹತ್ವದ ಘಟನೆಗಳು

೧೯೩೫ ಜನನ (ಡಿಸೆಂಬರ ೨೦)

ಜನ್ಮಸ್ಥಳ : ಗೋಕಾಕ, ಬೆಳಗಾವಿ ಜಿಲ್ಲೆ

ತಂದೆ : ಶ್ರೀ ಶಂಕರೆಪ್ಪ

ತಾಯಿ : ಶ್ರೀಮತಿ ದುಂಡಮ್ಮ

೧೯೫೫ ಬೆಳಗಾವಿ ಲಿಂಗರಾಜ ಕಾಲೇಜಿನಲ್ಲಿ ಪದವಿ ಶಿಕ್ಷಣ ಪ್ರಾರಂಭ; ಕವನ, ಲೇಖನ ರಚನೆ ಆರಂಭ.

೧೯೫೭ ಮೊದಲು ಪುಸ್ತಕ "ಭಾಗ್ಯೋದಯ" (ಕವನ ಸಂಗ್ರಹ) ಪ್ರಕಟಣೆ

೧೯೫೯ ಶಾರದಾದೇವಿಯೊಡನೆ ಗೋಕಾಕದಲ್ಲಿ ಮದುವೆ

ಮಕ್ಕಳು : ಶ್ರೀಮತಿ ಆಶಾ ಸುಭಾಷ ನಾಗೌಡ, ಬಿ.ಎ.ಬಿ.ಎಡ್

ಮೊಮ್ಮಕ್ಕಳು : ಸ್ವಪ್ನಾ, ಸಂದೀಪ, ಸ್ನೇಹಾ

೧೯೬೦ ಬಿ.ಎ.ಪದವಿ, ಗೋಕಾಕ ಮನ್ಸಿಪಲ್ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ ಸೇರ್ಪಡೆ

೧೯೬೫ ಬಿ.ಇಡಿ. ಪದವಿ, ನಂತರ ಸ್ನಾತಕೋತ್ತರ ಪದವಿವರೆಗಿನ ಶಿಕ್ಷಣ.

೧೯೭೨ ಸೊಲ್ಲಾಪುರದಲ್ಲಿ 'ವರಕವಿ' ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಜರುಗಿದ ಹೊರನಾಡು ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯಲ್ಲಿ ಕಾವ್ಯವಾಚನ.

೧೯೭೬ ಮೊದಲ ಕಥಾ ಸಂಕಲನ "ಮಾಮಾ ನಾ ನಿರ್ದೋಷಿ" ಪ್ರಕಟನೆ.

೧೯೭೭ ಕರ್ನಾಟಕ ವಿಶ್ವವಿದ್ಯಾಲಯ ವ್ಯಾಸಂಗ ವಿಸ್ತರಣ ಮಾಲೆಯಲ್ಲಿ ಉಪನ್ಯಾಸ ರಾಯಚೂರ ಜಿಲ್ಲೆ, ತಾವರಗೆರೆಯಲ್ಲಿ.

೧೯೮೧ ಸಿಂದಗಿ ಕನ್ನಡ ಬಳಗದಿಂದ ಸನ್ಮಾನ

೧೯೮೧ ಅಂಕೋಲಾದಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಏರ್ಪಡಿಸಿದ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದಲ್ಲಿ ಪ್ರಬಂಧ ಮಂಡನೆ(ಫೆ)

೧೯೮೧ ಬೆಂಗಳೂರಿನಲ್ಲಿ ಜರುಗಿದ ರಾಷ್ಟ್ರೋತ್ಥಾನ ಪರಿಷತ್ತಿನ "ಭಾರತ ಭಾರತಿ" ಮಂಗಳ ಸಮಾರಂಭದಲ್ಲಿ ರಾಜ್ಯಪಾಲ ಶ್ರೀ ಗೋವಿಂದ ನಾರಾಯಣ

ಅವರ ಅಧ್ಯಕ್ಷತೆಯಲ್ಲಿ ಲೇಖಕ ಮಿತ್ರರೊಂದಿಗೆ ಸನ್ಮಾನ (ಜ.೧೧)

೧೯೮೧ ಸರಕಾರಿ ಸೇವೆಯಲ್ಲಿ (ಜುಲೈ ೧)

೧೯೮೩ ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ಪರವಾಗಿ ವಿಜಾಪುರ ಜಿಲ್ಲಾ ಸಾಹಿತ್ಯ ಸಂಸ್ಕೃತಿ ಸಂಘದ ಆಶ್ರ ಯದಲ್ಲಿ ಜಮಖಂಡಿಯಲ್ಲಿ "ಕನ್ನಡ ಭಾವಗೀತೆಗಳಲ್ಲಿ ರಾಷ್ಟ್ರೀಯತೆ" ಕುರಿತು ಉಪನ್ಯಾಸ.

೯೮೬೩ ನಾಗನೂರಿನ ಸರ್ಕಾರಿ ಜ್ಯೂನಿಯರ ಕಾಲೇಜಿನಲ್ಲಿ ಅಧ್ಯಾಪಕರು

೧೯೮೪ 'ಹಳದಿ ಕಣ್ಣಿನವರು' ಕಥಾ ಸಂಕಲನ ಬಿಡುಗಡೆ (ಬೆಳಗಾವಿ)

೧೯೮೫ 'ಗಾಳಿಪಟ' ಬಿಡುಗಡೆ (ಗೋಕಾಕದಲ್ಲಿ)

೧೯೮೭ ಬೆಳಗಾವಿ ಸರಕಾರಿ ಚಿಂತಾಮಣರಾವ್ ಜ್ಯುನಿಯರ ಕಾಲೇಜಿನಲ್ಲಿ ಅಧ್ಯಾಪಕರು.

೧೯೮೭ 'ಡಾ॥ ಶ್ಯಾಮಪ್ರಸಾದ ಮುಖರ್ಜಿ' ದ್ವಿತೀಯ ಆವೃತ್ತಿ ಬಿಡುಗಡೆ, ಕರ್ನಾಟಕ ವಿಧಾನ ಪರಿಷತ್ ಉಪಸಭಾಪತಿ ಶ್ರೀ ಮಲ್ಲಿಕಾರ್ಜುನಯ್ಯ ಅವರಿಂದ.

೧೯೮೭ ಬೆಳಗಾವಿ ಲೋಕದರ್ಶನ ದಿನಪತ್ರಿಕೆಯಲ್ಲಿ ನೂರು ಅಂಕಣ ಲೇಖನ ಬರೆದ ನಿಮಿತ್ತ ನಾಗರಿಕರ ಸನ್ಮಾನ

೧೯೮೭ ಇತ್ತೀಚಿನ ಕವನ ಸಂಕಲನ "ತೋಳ ಬಂದಾವೋ ತೋಳ" ಬಿಡುಗಡೆ

೧೯೯೨ ಜನಪದ ಸಾಹಿತ್ಯ ಪರಷತ್ ಪರವಾಗಿ ಧಾರವಾಡದಲ್ಲಿ ಜರುಗಿದ ೨ನೇ ಬೂಸಾ ಸಾಹಿತ್ಯ ಸಮಾವೇಶದಲ್ಲಿ ಚರ್ಚೆ ಹಾಗೂ ಕವಿಗೋಷ್ಠಿಯಲ್ಲಿ ಕಾವ್ಯವಾಚನ.

ಅಧ್ಯಕ್ಷತೆ : ಡಾ॥ ಸಿ. ಪಿ. ಕೆ. (ಪೇ.೩೧)

೧೯೯೨ ಗೋಕಾಕದಲ್ಲಿ ಕರ್ನಾಟಕ ರಾಜ್ಯೋತ್ಸವ ಕವಿಗೋಷ್ಠಿ ಉದ್ಘಾಟನೆ (ಅಕ್ಟೋಬರ ೩೧)

೧೯೯೨ ಗೋಕಾಕದಲ್ಲಿ ಕರ್ನಾಟಕ ರಾಜ್ಯೋತ್ಸವ ಸನ್ಮಾನ್ಯ- ಶಾಸಕರಾದ ಶ್ರೀ ಎಸ್.ಎಚ.ಕರನಿಂಗ ಅವರಿಂದ (ನ.೧)

೧೯೯೩ ಕೊಪ್ಪಳದಲ್ಲಿ ಜರುಗಿದ ಅಖಿಲ ಭಾರತ ೬೨ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾವೈಕ್ಯ ಕವಿಗೋಷ್ಠಿಯಲ್ಲಿ ಕಾವ್ಯವಾಚನ (ಫೆ.೬)

೧೯೯೩ ನಾಡೋಜ ಡಾ.ಚೆನ್ನವೀರ ಕಣವಿಯವರಿಂದ 'ವೀಣೆ' ಅಭಿನಂದನ ಗ್ರಂಥ ಲೋಕಾರ್ಪಣೆ

೧೯೯೭ ಮಂಗಳೂರಲ್ಲಿ ಜರುಗಿದ ಅ.ಬಾ.ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕಾವ್ಯ ವಾಚನ.

೨೦೦೬ (೯-೭) ಶ್ರೀ ಶಶಿಕಾಂತ ನಾಯಕ ಸಚಿವರು ತೋಟಗಾರಿಕೆ ಇಲಾಖೆ ಕರ್ನಾಟಕ ಸರಕಾರ ಅವರಿಂದ 'ನಿರಂತರ' ಸಮಗ್ರ ಕಾವ್ಯ ಲೋಕಾರ್ಪಣೆ

೨೦೦೬ (೨೭-೧೨) ಬಾಳೇಶ ಲಕ್ಷೆಟ್ಟಿಯವರ ಅಮೃತ ಮಹೋತ್ಸವ ವರ್ಷದ ಚಾಲನೆ 'ಬದುಕು' ಗ್ರಂಥ ಬಿಡುಗಡೆ : ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಜಿನದತ್ತ ದೇಸಾಯಿಯವರ ಅಧ್ಯಕ್ಷತೆ, ಡಾ. ಬಸವರಾಜ ಜಗಜಂಪಿ, ಮಹಾಲಿಂಗ ಮಂಗಿ ಉಪಸ್ಥಿತಿ.

೨೦೦೯ ಕನ್ನಡ ಸಾಹಿತ್ಯ ಪರಿಷತ್ತು ಬೆಳಗಾವಿ ಜಿಲ್ಲಾ ಘಟಕದಿಂದ ಸನ್ಮಾನ ಪ್ರೋ. ಶ್ರೀಕಾಂತ ಶಾನವಾಡ ವಿರಚಿತ (೮-೧) ಶ್ರೀ ಬಾಳೇಶ ಲಕ್ಷಟ್ಟಿಯವರ "ಕಾವ್ಯಚಿಂತನ" ಕೃತಿ ಲೋಕಾರ್ಪಣೆ ಪೂಜ್ಯ ಶ್ರೀ ಗುರುಸಿದ್ಧಸ್ವಾಮಿಗಳು ಕಾರಂಜಿಮಠ ಬೆಳಗಾವಿ ಅವರಿಂದ

೧೯೮೭ 'ಹೋರಾಟಗಾರ' ಪುಸ್ತಕ ಬಿಡುಗಡೆ ಸಂದರ್ಭದಲ್ಲಿ ಶಾಸಕಿ ಶ್ರೀಮತಿ ಲೀಲಾವತಿ ಪ್ರಸಾದರಿಂದ ಗೋಕಾಕದಲ್ಲಿ ಸತ್ಕಾರ.

೧೯೮೮ ಇಪ್ಪತ್ತೈದು ಕೃತಿಗಳನ್ನು ಬರೆದ ನಿಮಿತ್ತ ಬೆಳಗಾವಿಯಲ್ಲಿ ಅಭಿನಂದನಾ ಸಮಾರಂಭ ಸಾನಿಧ್ಯ : ಪೂಜ್ಯ ಶ್ರೀ ಮ.ನಿ.ಪ್ರಸ್ವಶ್ರೀ ಶಿವಬಸವ ಮಹಾಸ್ವಾಮಿಗಳು ರುದ್ರಾಕ್ಷಿಮಠ(ನಾಗನೂರ) ಬೆಳಗಾವಿ

ಅಧ್ಯಕ್ಷತೆ : ಶ್ರೀ ಎಸ್.ಬಿ.ಸಿದ್ನಾಳ, ಲೋಕಸಭಾ ಸದಸ್ಯರು

(ಜೂನ ೩)

೧೯೮೯ ಬಾಳೇಶ ಲಕ್ಷೆಟ್ಟಿಯವರ ಸಮಗ್ರ ಸಾಹಿತ್ಯ ಕೃತಿಗಳ
ವಿಚಾರ ಸಂಕಿರಣ
ಅಧ್ಯಕ್ಷತೆ : ಶ್ರೀ ರಂ.ಶಾ.ಲೋಕಪುರ ಹಿರಿಯ ಸಾಹಿತಿಗಳು (ಫೆ. ೧೨)

೧೯೮೯ ಶ್ರೀ ಜಗನ್ನಾಥರಾವ ಜೋಶಿಯವರಿಂದ "ಡಾ॥ ಶ್ಯಾಮಪ್ರಸಾದ
ಮುಖರ್ಜಿ" ಮೂರನೆ ಆವೃತಿ ಬಿಡುಗಡೆ (ಬೆಳಗಾವಿ)

೧೯೮೯ ಸಿದ್ದೀರಾಯಣ ಕಾದಂಬರಿ ಎನ್ಕೆ ಅವರಿಂದ ಬಿಡುಗಡೆ

೧೯೯೦ ಸಿದ್ದೀರಾಯಣ ಕಾದಂಬರಿ ಕುರಿತು ವಿಚಾರ ಸಂಕಿರಣ
ಅಧ್ಯಕ್ಷತೆ ಡಾ॥ ಕೆ.ಆರ್. ದುರ್ಗಾದಾಸ್ ಮುಖ್ಯಸ್ಥರು, ಕನ್ನಡ ವಿಭಾಗ
ಕ.ವಿ.ವಿ.ಸ್ನಾತಕೋತ್ತರ ಕೇಂದ್ರ ಬೆಳಗಾವಿ (ಅಗಸ್ಟ ೨೫)

೧೯೯೧ ಜಗನ್ನಾಥರಾವ ಜೋಶಿ ಜೀವನ ಚರಿತ್ರೆ ಬಿಡುಗಡೆ (ಅಕ್ಟೋಬರ ೩೦)

೧೯೯೧ ಕನ್ನಡ ಶಕ್ತಿಕೇಂದ್ರ ಮೂರನೆಯ ಮಹಾಧಿವೇಶನದ ಬೆಳಗಾವಿ ಜಿಲ್ಲೆ
ಕವಿಗೋಷ್ಠಿಯಲ್ಲಿ ಕಾವ್ಯವಾಚನ (ಡಿ.೭)

೧೯೯೧ ಬಸವರಾಜ ಕಟ್ಟಿಮನಿ ವಿಚಾರ ವೇದಿಕೆ ಉದ್ಘಾಟನಾ ಸಮಾರಂಭದ
ಕವಿಗೋಷ್ಠಿಯಲ್ಲಿ ಕಾವ್ಯವಾಚನ (ಧಾರವಾಡ ಅಕ್ಟೋಬರ ೫)

೧೯೯೧ ಸಿದ್ದೀರಾಯಣ ದ್ವಿತೀಯ ಆವೃತ್ತಿಯ ಬಿಡಗಡೆ
ಬಿಡುಗಡೆ: ಡಾ॥ ಬುದ್ದಣ್ಣ ಹಿಂಗಮಿರೆ
ಅಧ್ಯಕ್ಷತೆ : ಚೆನ್ನವೀರ ಕಣವಿ (ಸಪ್ಟೆಂಬರ ೭) ೧೯೯೨ 'ಭಾವಸುರಭಿ'
ಬಿಡುಗಡೆ ಸಾನಿಧ್ಯ ; ಶ್ರೀ ಪಂಚಮ ಶಿವಲಿಂಗೇಶ್ವರ ಮಹಾಸ್ವಾಮಿಗಳು
ಜಗದ್ಗುರು ಸಿದ್ಧ ಸಂಸ್ಥಾನಮಠ ನಿಡಸೋಶಿ. ಬಿಡುಗಡೆ :
ಜಾನಪದರತ್ನ ಶ್ರೀ ಬಾಳಪ್ಪ ಹುಕ್ಕೇರಿ (ಮಾರ್ಚ ೧೬)

೨೦೧೧ (೦೩-೧೨) ವಿಶ್ವ ಕನ್ನಡ ಸಮ್ಮೇಳನ ಬೆಳಗಾವಿ-ದೇಸಿ ಚಿಂತನೆಗೋಷ್ಠಿಯಲ್ಲಿ
ವಿಶೇಷ ಆಹ್ವಾನಿತರಾಗಿ ಬಾಗವಹಿಸಿದ್ದು.

೨೦೧೧ (೨೦-೦೧) 'ಸಾಮಾಜಿಕ ಪುನರ್‌ರಚನೆಯ ಅಗ್ರದೂತ ನಾನಾಜಿ
ದೇಶಮುಖ' ಗ್ರಂಥ ಲೋಕಾರ್ಪಣೆ ಖ್ಯಾತವಾಗ್ಮಿ-ಚಿಂತಕ ಶ್ರೀ ಸು.
ರಾಮಣ್ಣ ಅವರಿಂದ ಶ್ರೀ ರಂ.ಶಾ. ಲೋಕಮರ, ಶ್ರೀ ಜಿನದತ್ತ ದೇಸಾಯಿ,

ಡಾ.ಬಸವರಾಜ ಜಗಜಂಪಿ, ಶ್ರೀ ಅಭಯ ಪಾಟೀಲ ಶಾಸಕರು ಉಪಸ್ಥಿತಿ.

ಪತ್ರಿಕಾ ಅಂಕಣಕಾರರು : 'ಲೋಕದರ್ಶನ' ದಲ್ಲಿ ವಾರದ ಚಪಂತನೆ-೧೦೦

'ನಾಡೋಜ' ದಲ್ಲಿ ಎಲೆ ಮರೆಯಲ್ಲಿರುವವರು-೧೦೦

'ಕನ್ನಡಮ್ಮ' ದಲ್ಲಿ 'ಅಪರೂಪದ ವ್ಯಕ್ತಿಗಳು-೪೦

ಸಂಸ್ಥಾಪಕ ಅಧ್ಯಕ್ಷ, ಸಾಹಿತ್ಯ ಕಲಾ ವೇದಿಕೆ : ಬೆಳಗಾವಿ

ಆಕಾಶವಾಣಿ: ಕಾವ್ಯವಾಚನ, ಕಥಾವಾಚನ, ಚಿಂತನ ಇತ್ಯಾದಿ ಹಲವಾರು

ಕಾರ್ಯಕ್ರಮಗಳ 'ಚಂದನ' ಟಿ.ವ್ಹಿ.ಸಂದರ್ಶನ.

- **ಲಕ್ಷೆಟ್ಟಿಯವರಿಗೆ ಸಂದ ಪ್ರಶಸ್ತಿ ಗೌರವಗಳು**

೧. ಸತೀಶ ಸಾಹಿತ್ಯ ಸೌರಭ ಗೋಕಾವಿ ನಾಡಿನ ಸಾಹಿತ್ಯ ಸಮಾವೇಶದಲ್ಲಿ ಅಭಿನಂದನ ಪತ್ರ ಡಾ.ಚಂದ್ರಶೇಖರ ಕಂಬಾರ (ಜ್ಞಾನಪೀಠ ವಿಜೇತ)ಗೌರವ ಅಧ್ಯಕ್ಷರು, ನಾಡೋಜ ಚನ್ನವೀರ ಕಣವಿ (ಸಮ್ಮೇಳನದ ಸರ್ವಾಧ್ಯಕ್ಷರು) ಸತೀಶ ಜಾರಕೀಹೊಳಿ (ಅಧ್ಯಕ್ಷರು) ಇವರಿಂದ ಸನ್ಮಾನ (೨೭,೨೮ ಸಪ್ಟಂಬರ ೨೦೦೮

೨. ಗೋಕಾಕ್ ಅರ್ಬನ್ ಕೋ-ಆಪರೇಟಿವ್ ಕ್ರೆಡಿಟ್ ಬ್ಯಾಂಕ ಲಿ., ಗೋಕಾಕ ಇವರಿಂದ ಹಾಗೂ ವಿಜಾಪೂರ ಜ್ಞಾನಯೋಗಾಶ್ರಮ ಶ್ರೀ ಸಿದ್ಧೇಶ್ವರ ಸ್ವಾಮಿಗಳಿಂದ ಸನ್ಮಾನ.

೩. ಸಿರಿಗನ್ನಡ ರಾಷ್ಟ್ರೀಯ ಪ್ರತಿಷ್ಠಾನ ಬೆಳಗಾವಿ ಇವರಿಂದ 'ಸಿರಿಗನ್ನಡ' ಗೌರವ ಪ್ರಶಸ್ತಿ.

೪. ಬೆಳಗಾವಿ ನಾಲ್ಕನೇ ಕನ್ನಡ ಸಾಹಿತ್ಯ ಸಮ್ಮೇಳನ ಪ್ರಶಸ್ತಿ

೫. ಗೋಕಾಕ ತಾಲೂಕಾ ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರು ೯ ಜೂನ ೨೦೧೩

೬. ಶ್ರೀ ಅಂಬಾ ದರ್ಶನ ಪೀಠದಿಂದ ರಾಜ್ಯಮಟ್ಟದ 'ಸಾಹಿತ್ಯರತ್ನ' ಪ್ರಶಸ್ತಿ ೧೪-೧೩-೨೦೧೩ ಇತ್ಯಾದಿ.

- **ಲಕ್ಷೆಟ್ಟಿಯವರ ಕುರಿತ ಅಭಿನಂದನಾ ಗ್ರಂಥಗಳು**

೧. ಅಭಿನಂದನೆ- ಸಂ. ಲಕ್ಷ್ಮೀನಾರಾಯಣ ಶಾಸ್ತ್ರಿ

೨. ವೀಣೆ- ಸಂ. ಡಾ. ಎಚ್.ಆಯ್.ತಿಮ್ಮಾಪೂರ

೩. ಬಾಳೇಶ ಲಕ್ಷೆಟ್ಟಿ ಬದುಕು-ಬರಹ : ಮಹಾಲಿಂಗ ಮಂಗಿ

೪. ಕಾವ್ಯ ಚಿಂತನೆ : ಪ್ರೋ. ಶ್ರೀಕಾಂತ ಶಾನವಾಡ

೫. ಅನಾವರಣ (ಅಮೃತ ಮಹೋತ್ಸವ ಅಭಿನಂದನ ಗ್ರಂಥ)
ಸಂ. ಪ್ರೋ.ಎಲ್.ವಿ. ಪಾಟೀಲ (ಹುಕ್ಕೇರಿ ತಾಲೂಕಾ ಕ.ಸಾ.ಪ.ಅಧ್ಯಕ್ಷರು)

## ಆಕರ ಗ್ರಂಥಗಳು

೧. ವೀಣೆ : (ಶ್ರೀ ಬಾಳೇಶ ಲಕ್ಷೆಟ್ಟಿ ಅಭಿನಂದನ ಗ್ರಂಥ) ಸಂ.ಡಾ.ಎಚ್.ವಾಯ್ ತಿಮ್ಮಾಪೂರ ಮುದ್ರಕರು : ಮೋಹನ ಕುಲಕರ್ಣಿ, ವಿಜಯಲಕ್ಷ್ಮಿ ಆರ್ಟ ಪ್ರಿಂಟರ್ಸ ಶೇರಿ ಗಲ್ಲಿ, ಬೆಳಗಾವಿ – ೧೯೯೩

೨. 'ನಾ' ಇಲ್ಲದಿದ್ದಾಗ : ಬಾಳೇಶ ಲಕ್ಷೆಟಿಯವರ ಕವನ ಸಂಕಲನ (೧೪) ಲೋಕವಿದ್ಯಾ ಪ್ರಕಾಶನ ಸಂಕೇಶ್ವರ– ಡಿಸೆಂಬರ ೨೦೧೩

೩. ಅನಾವರಣ : ಬಾಳೇಶ ಲಕ್ಷೆಟ್ಟಿಯವರ ಅಮೃತ ಮಹೋತ್ಸವ ಅಭಿನಂದನ ಗ್ರಂಥ : ಸಂಪಾದಕರು : ಪ್ರೊ.ಎಲ್.ವಿ.ಪಾಟೀಲ (ಅಧ್ಯಕ್ಷರು : ಕ.ಸಾ.ಪ.ಹುಕ್ಕೇರಿ) ಪ್ರಕಾಶಕರು : ಬಾಳೇಶ ಲಕ್ಷೆಟ್ಟಿ ಅಮೃತ ಮಹೋತ್ಸವ ಅಭಿನಂದನಾ ಸಮಿತಿ ಬೆಳಗಾವಿ– ೨೦೧೧

೪. ಬಾಳೇಶ ಲಕ್ಷೆಟ್ಟಿ ಬದುಕು ಬರಹ – ಮಹಾಲಿಂಗ ಮಂಗಿ, ಶೃಂಗಾರ ಪ್ರಕಾಶನ, ಹೊನ್ನಾವರ (೧೯೯೮)

೫. ಭಾರತೀಯ ಕಾವ್ಯ ಮೀಮಾಂಸೆ : ತಿ.ನಂ.ಶ್ರೀಕಂಠಯ್ಯ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ೨೦೦೭

೬. ಕಾವ್ಯ ಚಿಂತನ (ಬಾಳೇಶ ಲಕ್ಷೆಟ್ಟಿಯವರ ಕುರಿತು) : ಶ್ರೀಕಾಂತ ಶಾನವಾಡ ಸೂರ್ಯಪ್ರಾಕಾಶನ ಮಲ್ಲಾಡಿಹಳ್ಳಿ, ಹೊಳಲ್ಕೆರೆ ತಾಲ್ಲೂಕ, ಚಿತ್ರದುರ್ಗ ಜಿಲ್ಲೆ – ೨೦೦೮

೭. ಕಾವ್ಯಾರ್ಥ ಚಿಂತನ : ಡಾ. ಜಿ.ಎಸ್.ಶಿವರುದ್ರಪ್ಪ, ಪ್ರೀಯದರ್ಶನಿ ಪ್ರಕಾಶನ ಬೆಂಗಳೂರ – ೨೦೧೦

೮. ನಿರಂತರ : (ಬಾಳೇಶ ಲಕ್ಷೆಟ್ಟಿಯವರ ಕಾವ್ಯ ಸಂಪುಟ) : ಸಂ. ಡಾ.ಎಚ್.ಆಯ್.ತಿಮ್ಮಾಪೂರ, ಹಸಿರುಕ್ರಾಂತಿ ಪ್ರಕಾಶನ, ಬೆಳಗಾವಿ – ೨೦೦೫

### ಪತ್ರಿಕೆಗಳು

| .ನಂ. | ಪತ್ರಿಕೆ | ಸಂಚಿಕೆ | ದಿನಾಂಕ |
|---|---|---|---|
| ೧. | ವಿಕ್ರಮ | ವಾರ ಪತ್ರಿಕೆ, ಬೆಂಗಳೂರು | ೧೩-೭-೨೦೧೪ |
| ೨. | ಉದಯವಾಣಿ | ದಿನಪತ್ರಿಕೆ ಹುಬ್ಬಳ್ಳಿ | ೧೨-೨-೨೦೧೪ |
| ೩. | ವಿಜಯವಾಣಿ | ದಿನಪತ್ರಿಕೆ. ಹುಬ್ಬಳ್ಳಿ | ೧೨-೨-೨೦೧೪ |
| ೪. | ಸಂಯುಕ್ತ ಕರ್ನಾಟಕ | ದಿನಪತ್ರಿಕೆ ಹುಬ್ಬಳ್ಳಿ | ೧೨-೨-೨೦೧೪ |
| ೫. | ಉದಯವಾಣಿ | ದಿನಪತ್ರಿಕೆ ಹುಬ್ಬಳ್ಳಿ | ೧೫-೭-೨೦೧೪ |

### ಸಂದರ್ಶನ

೧. ಮೇ ೧೧, ೨೦೧೪
೨. ಮೇ ೨೫, ೨೦೧೪
೩. ಜೂನ ೧, ೨೦೧೪
೪. ಜೂನ ೮, ೨೦೧೪


=========

